CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೫, ೨೦೦೫ (ಭಾದ್ರಪದ ೨೪, ಶಕ ವರ್ಷ ೧೯೨೭) | ಸಂಚಿಕೆ ೩೭ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಒಳಾಡಳಿತ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಒಇ 579 ಪಿಪಿಇ 2005, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2005**

ಬಾಗಲಕೋಟೆ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ದಾಖಲಾಗಿರುವ ಎಸ್.ಸಿ. ನಂ.122:1ರ ಕೌಂಟರ್ ಪ್ರಕರಣವಾದ ಎಸ್.ಸಿ.ನಂ.112:01 ರಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಹಾಗೂ ಪ್ರಕರಣವನ್ನು ನಡೆಸಲು ಸರ್ಕಾರಿ ಅಭಿಯೋಜಕರು, 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬಾಗಲಕೋಟೆ ಇವರನ್ನು ನೇಮಿಸಲಾಗಿದೆ. ಈ ಮೂಲಕ ಒಇ 93 ಪಿಪಿಇ 05, ದಿನಾಂಕ: 21.03.2005 ಅಧಿಸೂಚನೆಯನ್ನು ರದ್ದು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1177

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,

(ಕಾ. ಮತ್ತು ಸು. ಮತ್ತು ಕಾಫಿಪೋಸ್ ಮತ್ತು ಅಭಿಯೋಗಗಳು).

**ಒಳಾಡಳಿತ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಒಇ 477 ಪಿಪಿಇ 2005, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2005**

ಮುದ್ದೇಬಿಹಾಳ ಸಿವಿಲ್ ಜಡ್ಜ್ (ಜೂ.ಡಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ದಾಖಲಾಗಿರುವ ಸಿಸಿ.ನಂ.2:2005ರ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು ಸಹಾಯಕ ಸರ್ಕಾರಿ ಅಭಿಯೋಜಕರು, ಸಿವಿಲ್ ಜಡ್ಜ್ (ಜೂ.ಡಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬಸವನ ಬಾಗೇವಾಡಿ ಇವರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1178

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,

(ಕಾ. ಮತ್ತು ಸು. ಮತ್ತು ಕಾಫಿಪೋಸ್ ಮತ್ತು ಅಭಿಯೋಗಗಳು).

**ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ**

**ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯ, ಖನಿಜ ಭವನ, # 49, ಡಿ. ದೇವರಾಜ್ ಅರಸು ರಸ್ತೆ, ಬೆಂಗಳೂರು-560 001**

**ಕಛೇರಿ ಆದೇಶ**

**ಸಂಖ್ಯೆ: ಆಡಳಿತ/ಸಿಬ್ಬಂದಿ/ಇ5/108/2005-06, ದಿನಾಂಕ: 16ನೇ ಮೇ 2005**

**ವಿಷಯ :** ಶ್ರೀ ಪಾಲಣ್ಣ ಬಿನ್ ಸಣ್ಣಪಾಲಯ್ಯ, ಕಾಲುವೇಹಳ್ಳಿ, ಯಾದಲಗಟ್ಟ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ರವರನ್ನು ಇಲಾಖೆಯಲ್ಲಿನ ಗಣತಿದಾರರ ನೇರ ನೇಮಕಾತಿ ಬ್ಯಾಕ್‌ಲಾಗ್ ಹುದ್ದೆಗೆ ನೇಮಿಸುವ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001.

2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಸಕನಿ/ಬಿ&ಆರ್/ಸಿಆರ್/14/2003-04, ದಿನಾಂಕ: 5.2.2004.
3) ಈ ಕಛೇರಿ ಅಧಿಸೂಚನೆ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ5/425/04-05, ದಿನಾಂಕ: 24.2.2005 ಮತ್ತು 27.5.2005.
4) ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಛೇರಿ, ಚಿತ್ರದುರ್ಗ ರವರ ಪತ್ರ ಸಂಖ್ಯೆ: ಜಿಪವಕ/ಜಾತಿಸಿಂಧುತ್ವ/ಸಿಆರ್/84/2004-05/169, ದಿನಾಂಕ: 29.6.2005.
5) ಪೊಲೀಸ್ ಅಧೀಕ್ಷಕರವರ ಕಛೇರಿ, ಚಿತ್ರದುರ್ಗ ರವರ ಪತ್ರ ಸಂಖ್ಯೆ: ಎಸ್‌ಬಿ/196/2005, ದಿನಾಂಕ: 2.8.2005.

ಉಲ್ಲೇಖ (1)ರ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕ ಸೇವಾ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾದ ಹುದ್ದೆಗಳನ್ನು ತುಂಬದೆ ಇರುವಂತಹ ಖಾಲಿ ಹುದ್ದೆಗಳಿಗೆ (ವಿಶೇಷ ನೇಮಕಾತಿ) ನಿಯಮಾವಳಿ 2001ನ್ನು ಜಾರಿಗೊಳಿಸಲಾದ ಹಿನ್ನೆಲೆಯಲ್ಲಿ ಉಲ್ಲೇಖ (3)ರ ಈ ಕಛೇರಿ ಅಧಿಸೂಚನೆಯಲ್ಲಿ ಪರಿಶಿಷ್ಟ ಪಂಗಡದ ಒಂದು ಗಣತಿದಾರರ ನೇರ ನೇಮಕಾತಿ ಬ್ಯಾಕ್‌ಲಾಗ್ ಹುದ್ದೆಯನ್ನು ತುಂಬಲು ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅದರಂತೆ, ಸ್ವೀಕೃತಿಯಾದ ಅರ್ಜಿಗಳನ್ನು ಉಲ್ಲೇಖ (1)ರ ಸರ್ಕಾರದ ಅಧಿಸೂಚನೆಯಲ್ಲಿನ ನಿಯಮಗಳಂತೆ ಪರಿಶೀಲಿಸಿ ಸದರಿ ಗಣತಿದಾರರ ಬ್ಯಾಕ್‌ಲಾಗ್ ನೇರ ನೇಮಕಾತಿ ಹುದ್ದೆಗೆ ಶ್ರೀ ಎಸ್. ಪಾಲಣ್ಣ, ಬಿನ್ ಸಣ್ಣಪಾಲಯ್ಯ, ಕಾಲುವೇಹಳ್ಳಿ, ಯಾದಲಗಟ್ಟೆ ಅಂಚೆ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ರವರನ್ನು ತಾತ್ಕಾಲಿಕವಾಗಿ ಆಯ್ಕೆ ಮಾಡಿ ವೇತನ ಶ್ರೇಣಿ ರೂ.3850-100-4450-125-5700-150-7050 ರಲ್ಲಿ ಮಾಹೆಯಾನ ರೂ.3850/- ಮತ್ತು ಇತರೆ ನಿಗದಿತ ಭತ್ಯೆಗಳು ಲಭ್ಯವಾಗುವಂತೆ ಜಂಟಿ ನಿರ್ದೇಶಕರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ ಬಿಜಾಪುರ ಇಲ್ಲಿಗೆ ನೇಮಿಸಿ ಆದೇಶಿಸಲಾಗಿದೆ.

ಮೇಲೆ ತಿಳಿಸಿದ ಅಭ್ಯರ್ಥಿಯ ನೇಮಕಾತಿಯು ಈ ಕೆಳಗೆ ಸೂಚಿಸಿದ ನಿಬಂಧನೆ ಮತ್ತು ಷರತ್ತುಗಳಿಗೆ ಒಳಪಟ್ಟಿರುತ್ತದೆ:

1) ಅಭ್ಯರ್ಥಿಯು ಈ ಆದೇಶ ಪಡೆದ 15 ದಿನಗಳೊಳಗಾಗಿ ಅವರನ್ನು ನೇಮಕಾತಿ ಮಾಡಿರುವ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಸಂಬಂಧಪಟ್ಟ ಜಂಟಿ ನಿರ್ದೇಶಕರು ಅಭ್ಯರ್ಥಿಯು ಆದೇಶ ಪಡೆದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ಹಾಜರಾದ ಬಗ್ಗೆ ದೃಢೀಕರಿಸಿಕೊಳ್ಳುವುದು. ಯಾವುದೇ ಕಾರಣಕ್ಕೂ ಈ ಅವಧಿಯನ್ನು ವಿಸ್ತರಿಸುವುದಿಲ್ಲ. ನಿಗದಿತ ಸಮಯದಲ್ಲಿ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಅವರ ನೇಮಕಾತಿ ಆದೇಶವು ರದ್ದಾದಂತೆ ಭಾವಿಸುವುದು.
2) ಅಭ್ಯರ್ಥಿಯು ನೇಮಕಾತಿ ಹೊಂದಿದ ಸ್ಥಳಕ್ಕೆ ಹೋಗಲು ಯಾವುದೇ ತರಹದ ಪ್ರಯಾಣ ಭತ್ಯೆ ಅಥವಾ ಇನ್ನಾವುದೆ ಭತ್ಯೆಗಳಿಗೆ ಅರ್ಹರಿರುವುದಿಲ್ಲ.
3) ಅಭ್ಯರ್ಥಿಯು ಕರ್ತವ್ಯಕ್ಕೆ ಸೇರಿದ ದಿನಾಂಕದಿಂದ 2 ವರ್ಷಗಳ ಕಾಲ ಅರ್ಹತಾ ಪೂರ್ವ ಅವಧಿಯಲ್ಲಿರುತ್ತಾರೆ.
4) ಅಭ್ಯರ್ಥಿಯು ಅರ್ಹತಾ ಪೂರ್ವ ಅವಧಿಯಲ್ಲಿ ಗಣತಿದಾರರ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು.
5) ಸದರಿ ನೇಮಕಾತಿ ಆದೇಶವು ಮೂಲ ದಾಖಲಾತಿಗಳ ಪರಿಶೀಲನೆಯ ಷರತ್ತಿಗೆ ಒಳಪಟ್ಟಿರುತ್ತದೆ.
6) ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಈ ಕೆಳಕಂಡ ಮೂಲ ದಾಖಲಾತಿಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ ಒದಗಿಸತಕ್ಕದ್ದು.

ಅ) ಬಿ.ಎ. (ಅರ್ಥಶಾಸ್ತ್ರ ಅಥವಾ ಅಂಕಿ ಅಂಶ ವಿಷಯದಲ್ಲಿ) ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಮೂಲ ಪ್ರಮಾಣ ಪತ್ರ.
ಆ) ವಯಸ್ಸು ಮತ್ತು ಜನ್ಮ ದಿನಾಂಕದ ಬಗ್ಗೆ ಎಸ್.ಎಸ್.ಎಲ್.ಸಿ. ಮೂಲ ಪ್ರಮಾಣ ಪತ್ರ.
ಇ) ಜಿಲ್ಲಾ ಆರೋಗ್ಯ ಅಧಿಕಾರಿಗಳಿಂದ ದೇಹ ಸ್ಥಿತಿಯ ಬಗ್ಗೆ ಪ್ರಮಾಣ ಪತ್ರ.
ಈ) ಮೂಲ ಜಾತಿ ಪ್ರಮಾಣ ಪತ್ರ.
ಉ) ಅಭ್ಯರ್ಥಿಯು ಹೊಂದಿರುವ ಸ್ಥಿರ ಮತ್ತು ಚರ ಆಸ್ತಿಯ ದೃಢೀಕರಣ ಪತ್ರ.
ಊ) ಅಭ್ಯರ್ಥಿಯು ಭಾರತ ಸಂವಿಧಾನಕ್ಕೆ ನಿಷ್ಠೆಯಿಂದ ಸೇವೆ ಸಲ್ಲಿಸುವ ಬಗ್ಗೆ ಪ್ರಮಾಣ ಪತ್ರ.
ಋ) ಅಭ್ಯರ್ಥಿಯು ವಿವಾಹಿತರಾಗಿದ್ದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತವಾಗಿರುವ ಪತ್ನಿಯನ್ನು ಹೊಂದಿಲ್ಲದಿರುವ ಬಗ್ಗೆ ಪ್ರಮಾಣಿಕರಿಸಿದ ದೃಢೀಕರಣ ಪತ್ರ.
ಎ) ಅಭ್ಯರ್ಥಿಯು ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಣಿ ಪ್ರಮಾಣ ಪತ್ರ ಪಡೆದಿದ್ದರೆ, ಸದರಿ ನೋಂದಣಿ ಪತ್ರದ ಮೂಲ ಪ್ರತಿಯನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಹಾಜರಿಪಡಿಸುವುದು.

ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬಿಜಾಪುರ ರವರಿಗೆ ಅಭ್ಯರ್ಥಿಯ ಅರ್ಜಿ ಮತ್ತು ದಾಖಲಾತಿಗಳ ಪ್ರತಿಗಳನ್ನು ಹಾಗೂ ಗೆಜೆಟ್ ಪ್ರಕಟಣೆಯನ್ನು ಇದರೊಂದಿಗೆ ಕಳುಹಿಸಲಾಗಿದೆ. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲಿಸಿ ಜನ್ಮ ದಿನಾಂಕ, ಜಾತಿ ಮತ್ತು ಗಳಿಸಿದ ಅಂಕಗಳನ್ನು ದೃಢಪಡಿಸಿಕೊಳ್ಳಲು ಸೂಚಿಸಿದೆ. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ ನಂತರ ಅಭ್ಯರ್ಥಿಯು ಸಲ್ಲಿಸಿದ ಮೂಲ ದಾಖಲಾತಿಗಳ ಆಧಾರದ ಮೇಲೆ ಸಲ್ಲಿಸಿದ ದಾಖಲಾತಿಗಳ ದೃಢೀಕೃತ ಪ್ರತಿಯನ್ನು ಈ ಕಛೇರಿಗೆ ಕಳುಹಿಸಲು ಆದೇಶಿಸಿದೆ.

ಹಾಜರಾತಿ ಬಗ್ಗೆ ವರದಿ ಮಾಡಿದ ನಂತರ ಹೊಸ ಹುದ್ದೆಯ ದೃಢೀಕರಣ ಪತ್ರವನ್ನು ಈ ಕಛೇರಿಯಿಂದ ನೀಡಲಾಗುವುದು. ಉದ್ಯೋಗ ವಿನಿಮಯ ಕೇಂದ್ರದ ನೋಂದಣಿ ಪತ್ರವನ್ನು ಸಂಬಂಧಪಟ್ಟ ಕಛೇರಿಗೆ ಹಿಂತಿರುಗಿಸುವುದು.

ಪಿ.ಆರ್. 1179

ಅಧಿಕ ನಿರ್ದೇಶಕರು (ಆಡಳಿತ)
ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-560 018

**ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:15:ಎಲ್‌ಎಂಸಿ:2005-06, ದಿನಾಂಕ: 6ನೇ ಆಗಸ್ಟ್ 2005**

**ವಿಷಯ:** ಶಿವಮೊಗ್ಗ ತಾಲ್ಲೂಕು ಅರಣ್ಯ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ ಇದರ ಸಮಾಪನೆ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರ ಪ್ರಸ್ತಾವ ಸಂಖ್ಯೆ:ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:517:44:2005-06, ದಿನಾಂಕ: 4.7.2005.

**ಪ್ರಸ್ತಾವನೆ:**

ಶಿವಮೊಗ್ಗ ತಾಲ್ಲೂಕು ಅರಣ್ಯ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಶಿವಮೊಗ್ಗ, ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಡಿಆರ್‌ಎಸ್:ಕಾನೂನು-1:ನೋಂದಣಿ:20466/1999-2000, ದಿನಾಂಕ: 6.3.2000 ರಲ್ಲಿ ನೋಂದಣಿಯಾಗಿದ್ದು, ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟದ್ದಾಗಿರುತ್ತದೆ. ಈ ಸಂಘದವರು 2005-06 ರಿಂದ 2009-10ನೇ ಸಾಲಿನ ಆಡಳಿತ ಮಂಡಳಿಯನ್ನು ಕಾಯ್ದೆ ಅನುಸಾರ ರಚಿಸಲು ವಿಫಲರಾದ ಪ್ರಯುಕ್ತ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರು ಕಾಯ್ದೆ ಕಲಂ 28ಎ(8) ರನ್ವಯ ದಿನಾಂಕ: 1.4.2005 ರಲ್ಲಿ ಮಾರಾಟಾಧಿಕಾರಿ, 1ನೇ ವೃತ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿರುತ್ತಾರೆ. ಸದರಿಯವರು ಪ್ರಭಾರ ವಹಿಸಿಕೊಂಡು ದಿನಾಂಕ: 17.5.2005 ರಂದು ನಡವಳಿಕೆ ಮಾಡಿದ್ದು, ಈ ಸಂಘವು ಬೈಲಾ ಉದ್ದೇಶಗಳಂತೆ ಕಾರ್ಯನಿರ್ವಹಿಸುತ್ತಿಲ್ಲ ಹಾಗೂ ಸಂಘದವರಿಗೆ ವ್ಯವಹಾರ ಮುಂದುವರೆಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ನಿರ್ಣಯಿಸಿ ಸಮಾಪನೆಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರು ಈ ಸಂಘವು ಸ್ಥಗಿತಗೊಂಡಿದೆ. ಸಂಘದಲ್ಲಿ ವೇತನ ಕಾರ್ಯದರ್ಶಿ ಇರುವುದಿಲ್ಲ. ಸಂಘದ ಲೆಕ್ಕಪತ್ರಗಳು ದಿನಾಂಕ: 1.4.2002 ರಿಂದ ಆಡಿಟ್ ಆಗಿರುವುದಿಲ್ಲ. ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನವಿಲ್ಲದಿರುವ ಕಾರಣಗಳಿಂದಾಗಿ ಸಂಘವನ್ನು ಸಮಾಪನೆಗೊಳಿಸಬೇಕೆಂದು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗರವರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು ಸಂಘದವರಿಗೆ ಸಂಘದ ವ್ಯವಹಾರ ಮುಂದುವರೆಸಿಕೊಂಡು ಹೋಗಲು ಆಸಕ್ತಿ ಇಲ್ಲದಿರುವುದನ್ನು ಗಮನಿಸಲಾಗಿದ್ದು, ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನವಿಲ್ಲವೆಂದು ಸಂಘದ ಪುನಃಶ್ಚೇತನ ಸಾಧ್ಯವಿಲ್ಲದಿರುವುದರಿಂದ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಈ ಕೆಳಕಂಡಂತೆ ಆದೇಶಿಸಲಾಗಿದೆ.

**"ಆದೇಶ"**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಕೆ.ಹೆಚ್. ತಿಮ್ಮಯ್ಯ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಶಿವಮೊಗ್ಗ ತಾಲ್ಲೂಕು ಅರಣ್ಯ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ ಈ ಸಹಕಾರ ಸಂಘವನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ, ಕಲಂ 78 ರನ್ವಯ ಮಾರಾಟಾಧಿಕಾರಿ, 1ನೇ ವೃತ್ತ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಕೂಡಲೇ ಪಡೆದುಕೊಂಡು ಸಂಘದ ಆಸ್ತಿ-ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೇಗೊಳಿಸಿ, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಈ ಆದೇಶದ ದಿನಾಂಕದಿಂದ 90 (ತೊಂಬತ್ತು) ದಿನಗಳೊಳಗಾಗಿ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ದಿನಾಂಕ: 6.8.2005 ರಂದು ಹೊರಡಿಸಲಾಗಿದೆ.

**ಕೆ.ಹೆಚ್. ತಿಮ್ಮಯ್ಯ**

ಪಿ.ಆರ್. 1180 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**KARNATAKA GOVERNOR'S SECRETARIAT**
**P.B. NO.5033, RAJ BHAVAN, BANGALORE**
**NOTIFICATION**
**No. GS 7 GLM 2005, Dated: 18th August 2005**

WHEREAS post-facto approval of the Chancellor was accorded on 3.8.2004 and 10.8.2004 to the Regulations governing Semester Scheme of B.Sc., B.Com and B.A. Degree courses in Gulbarga University to be introduced from the academic year 2003-04.

WHEREAS the Vice Chancellor, Gulbarga University has reported that the Regulations could not be brought into effect due to unpreparedness of the colleges to introduce the Semester Scheme.

WHEREFORE, I, T.N. CHATURVEDI, Governor of Karnataka and the Chancellor, Gulbarga University do hereby withdraw the approval accorded on 3.8.2004 and 10.8.2004 to the Regulations governing Semester Scheme of B.Sc., B.Com and B.A. Degree Courses of Gulbarga University forthwith. The Vice-Chancellor shall submit fresh regulations as and when the University is prepared to implement them if approved by the Chancellor.

**T.N. CHATURVEDI**
GOVERNOR & CHANCELLOR
P.R. 1181 **SHARADA SUBRAMANIAM**
Joint Secretary to Governor.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**
**ಅಧಿಸೂಚನೆ**
**ಸಂಖ್ಯೆ: ಆಕುಕ 14 ಎಂಎಂ ಸಿ 2005, ಬೆಂಗಳೂರು, ದಿನಾಂಕ: 25ನೇ ಜುಲೈ 2005**

ವೈದ್ಯಕೀಯ ಶಿಕ್ಷಣ ಇಲಾಖೆಯ ಈ ಕೆಳಕಂಡ ನೇತ್ರಚಿಕಿತ್ಸಾ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರುಗಳಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ 16,400-20,000 ರೂ.ಗಳ ಎಐಸಿಟಿಇ ವೇತನ ಶ್ರೇಣಿಯ ನೇತ್ರಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಹುದ್ದೆಯಲ್ಲಿ ಸ್ಥಾನಪನ್ನರಾಗಲು ಬಡ್ತಿ ನೀಡಿ ಮುಂದಿನ ಆದೇಶದವರೆಗೆ ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಹುದ್ದೆಗಳಲ್ಲಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು, ಹೊಂದಿರುವ ಹುದ್ದೆಯ ಪದನಾಮ ಮತ್ತು ಸೇವಾನಿರತರಾದ ಕಾಲೇಜು | ನೇಮಿಸಲ್ಪಟ್ಟಿರುವ ಹುದ್ದೆಯ ಪದನಾಮ ಮತ್ತು ಕಾಲೇಜು |
|---|---|---|
| 1 | ಡಾ: ಸರೋಜಿನಿ ಎಸ್. ನಾಯಕ್, ನೇತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ನಿಯೋಜನೆ ಮೇಲೆ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ. | ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು - ಡಾ: ಹೆಚ್.ಆರ್. ಪದ್ಮಿನಿ ರವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. ಈ ಹುದ್ದೆಯನ್ನು ಪದಗ್ರಹಿಸಿದ ಮರುದಿನದಿಂದ ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕ ಖಾಲಿ ಹುದ್ದೆಯಲ್ಲಿ ನಿಯೋಜನೆ ಮೇಲೆ ನೇಮಿಸಲಾಗಿದೆ. |
| 2 | ಡಾ: ಎಂ. ಶಿವಕುಮಾರ್, ನೇತ್ರಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು. | ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು - ಡಾ: ವೆಂಕಟಸ್ವಾಮಿ ರೆಡ್ಡಿ ರವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ |
| 3 | ಡಾ: ಎಸ್.ಎಂ. ಶಿವಶಂಕರಯ್ಯ, ನೇತ್ರಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು. | ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರು ಮೈಸೂರು ವೈದ್ಯಕೀಯ ಕಾಲೇಜು - ಡಾ: ಸರೋಜಿನಿ ಎಸ್. ನಾಯಕ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ. |
| 4 | ಡಾ: ಜಿ.ಎನ್. ಪಾಟೀಲ್, ನೇತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ನಿಯೋಜನೆ ಮೇಲೆ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ. | ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು - ಡಾ: ವತ್ಸಲಾ ರವರ ಬಡ್ತಿಯಿಂದ ತೆರವಾದ ಸ್ಥಾನದಲ್ಲಿ. ಈ ಹುದ್ದೆಯನ್ನು ಪದಗ್ರಹಿಸಿದ ಮರುದಿನದಿಂದ ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ನೇತ್ರಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಖಾಲಿ ಹುದ್ದೆಯಲ್ಲಿ ನಿಯೋಜನೆ ಮೇಲೆ ನೇಮಿಸಲಾಗಿದೆ. |
| 5 | ಡಾ: ಟಿ.ಕೆ. ರಮೇಶ್, ನೇತ್ರಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು. | ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು - ಡಾ: ಎ.ಆರ್. ಅರುಣ ರವರ ಬಡ್ತಿಯಿಂದ ತೆರವಾದ ಸ್ಥಾನದಲ್ಲಿ. |
| 6 | ಡಾ: ವೈ.ಬಿ. ಬಜೆಂತ್ರಿ, ನೇತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ನಿಯೋಜನೆ ಮೇಲೆ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ. | ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು - ಡಾ: ಜಿ.ಎನ್. ಪಾಟೀಲ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ, ಈ ಹುದ್ದೆಯನ್ನು ಪದಗ್ರಹಿಸಿದ ಮರುದಿನದಿಂದ ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ನೇತ್ರಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಖಾಲಿ ಹುದ್ದೆಯಲ್ಲಿ ನಿಯೋಜನೆ ಮೇಲೆ ನೇಮಿಸಲಾಗಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1182

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಮಮಅ 210 ಪಿಹೆಚ್‌ಪಿ 2005, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2005**

ಮೈಸೂರಿನ ಸರ್ಕಾರಿ ಬ್ರೈಲ್ ಮುದ್ರಣಾಲಯದಲ್ಲಿನ (ಬ್ರೈಲಾ) Brailla 400 SR ಯಂತ್ರಕ್ಕೆ 5 ರೋಲ್ (500 ಕೆ.ಜಿ.) ರೋಲ್ ಪೇಪರ್ ಅನ್ನು ಪಾರದರ್ಶಿಕ ನಿಯಮಗಳಡಿ ಟೆಂಡರ್ ಪ್ರಕ್ರಿಯೆಯನ್ನು ಅನುಸರಿಸಿ ಖರೀದಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಈ ಟೆಂಡರ್ ಪ್ರಕ್ರಿಯೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ (7) ರನ್ವಯ ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರನ್ನು ಟೆಂಡರ್ ಬುಲೆಟಿನ್ ಅಧಿಕಾರಿಯಾಗಿ ನೇಮಿಸಲಾಗಿದೆ.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 9(i) ಹಾಗೂ 9(ii) ರಂತೆ ಜಿಲ್ಲಾಧಿಕಾರಿ ಮೈಸೂರು ಇವರನ್ನು ಅನುಕ್ರಮವಾಗಿ ಟೆಂಡರ್ ಆಹ್ವಾನಿಸುವ ಮತ್ತು ಅಂಗೀಕರಿಸುವ ಪ್ರಾಧಿಕಾರವಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1183

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## DEPARTMENT OF PERSONNEL AND ADMINISTRATIVE REFORMS

## NOTIFICATION

**No. DPAR 10 SMR 2005, Bangalore, Dated: 30th July 2005**

In exercise of the powers conferred by clause (ff) of rule 3 of the Karnataka Government Servants (Medical Attendance) Rules 1963, the Government of Karnataka hereby adds-

**I.** the following items after item 118 of schedule I to the said rules, namely:-

(119) Athena Hospital, Mangalore.

(120) Aruna Hospital, Dr. Radhakrishna Road, Tumkur.

(121) Vinayaka Hospital, Ashoknagar, Tumkur.
(122) Bapuji Nursing Home, Someshwarapuram, Tumkur.
(123) Kadli Ningamma Memorial Hospital M.C.C.B. Block, Davanagere.
(124) Gayathri Hospital Vijayanagar, Bangalore-40
(125) Akkur Speciality Hospital Koramangala, Bangalore.
(126) Vinayaka Hospital, Hanumanthanagar, Bangalore.
(127) Karthik Nethralaya, N.R. Colony, Ashoknagar, Bangalore-50.
(128) Manohar Saigowda Memorial Hospital and Laproscopic Training Centre, Mulbagal, Kolar District.
(129) Manasa Hospital, Gowribidanur, Kolar District.
(130) Prashanth Medical Services, Nehrunagar, Mandya.
(131) Suraksha Nursing Home, Mandya.
(132) Annapoorna Hospital, K.M. Road, Chickmagalur.
(133) Jayapriya Hospital, Bylappanavaranagar, Hubli.
(134) Patil Nursing Home, Gulbarga.
(135) Hemavathi Hospital, Hassan.

**II.** the following items after item 14 under sub heading "Diagnostic Centres" of the schedule I to the said rules namely:-

(15) Das Diagnostic Laboratory and Scanning Centre, Hassan.

By Order and in the name of the Governor of Karnataka,

P.R. 1184

**K. RAGHURAM BHANDARY**
Under Secretary to Government-2,
Department of Personnel and Administrative Reforms (Service Rules).

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರವರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:50-83:2005-06, ದಿನಾಂಕ: 11ನೇ ಆಗಸ್ಟ್ 2005**

**ವಿಷಯ :** ನಿಷ್ಕ್ರಿಯಗೊಂಡಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿಯಮಿತ, ಇವುಗಳನ್ನು ಸಮಾಪನೆಗೊಳಿಸಿರುವ ಬಗ್ಗೆ.

**ಉಲ್ಲೇಖ :** ಸಾಗರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ದಿನಾಂಕ: 20.6.2005.

**ಪ್ರಸ್ತಾವನೆ:**

ಸಾಗರ ಉಪ-ವಿಭಾಗದ ತಾಲ್ಲೂಕಿನಲ್ಲಿಯ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘಗಳು, ಅವರ ಕಛೇರಿಯಲ್ಲಿ ನೋಂದಣಿಯಾಗಿದ್ದು, ಅವುಗಳ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿದ್ದು, ಈ ಸಹಕಾರ ಸಂಘಗಳು ಪ್ರಾರಂಭದಿಂದಲೂ ಕಾರ್ಯ ಪ್ರಾರಂಭಿಸದೆ ನಿಷ್ಕ್ರಿಯಗೊಂಡಿರುವುದಾಗಿ ಹಾಗೂ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಸಂಘದ ವ್ಯವಹಾರದಲ್ಲಿ ಆಸಕ್ತಿ ಇರುವುದಿಲ್ಲವೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರು ವರದಿ ಮಾಡಿ ಸಮಾಪನೆಗೆ ಶಿಫಾರಸ್ ಮಾಡಿರುತ್ತಾರೆ. ಈ ಸಂಘಗಳ ಆರ್ಥಿಕ ತಃಖ್ತೆಗಳನ್ನು ಪರಿಶೀಲಿಸಲಾಗಿ ಪ್ರಾರಂಭದಲ್ಲಿ ಸಂಗ್ರಹಿಸಿದ ಷೇರು ಹಣವನ್ನು ಡಿ.ಸಿ.ಸಿ. ಬ್ಯಾಂಕಿನಲ್ಲಿಯ ಅಮಾನತ್ ಖಾತೆಯಲ್ಲಿರಿಸಿದ್ದು, ಇದರಿಂದ ಆರ್ಥಿಕವಾಗಿ ಯಾವುದೇ ವ್ಯವಹಾರವಾಗಿರುವುದಿಲ್ಲವೆಂದು ಸ್ಪಷ್ಟಪಡುತ್ತದೆ ಹಾಗೂ ಈ ಸಂಘದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಾಣುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರದನ್ವಯ, ಈ ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಶಿವಮೊಗ್ಗ ಜಿಲ್ಲೆಯಲ್ಲಿಯ ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ತೋರಿಸಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘಗಳನ್ನು ಸಮಾಪನೆಗೆ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73 ರನ್ವಯ ಸಮಾಪನೆಗೆ ಆದೇಶಿಸಿದ ಸಹಕಾರ ಸಂಘದ ಎದುರಿನಲ್ಲಿ ತೋರಿಸಿದವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಸಮಾಪನಾ ಸಹಕಾರ ಸಂಘದ ಪ್ರಭಾರ ಪಡೆದು ನಡವಳಿಕೆ ನಡೆಸತಕ್ಕದ್ದು. ಸಮಾಪನಾಧಿಕಾರಿಯವರು ಅಮಾನತ್ ಖಾತೆಯಲ್ಲಿರುವ ಹಣವನ್ನು ಡ್ರಾ ಮಾಡಿಕೊಂಡು, ಸದಸ್ಯರಿಗೆ ಷೇರು ಮೌಲ್ಯವನ್ನು ನಿರ್ಧರಿಸಿ ಪಾವತಿ ಮಾಡಿದ 30 ದಿನಗಳಲ್ಲಿ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 11.8.2005 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**
ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:50-83:2005-06, ದಿನಾಂಕ: 11.8.2005ಕ್ಕೆ ಸಂಬಂಧಿಸಿದ ಲಗತ್ತಿತ ಅನುಬಂಧ**

| ಕ್ರ. ಸಂ. | ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ: | ತಾಲ್ಲೂಕು | ನೋಂದಣಿ ನಂಬರ್ ದಿನಾಂಕ | ಸಮಾಪನಾಧಿಕಾರಿಯ ಹುದ್ದೆ |
|---|---|---|---|---|
| 1 | ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಸುಣ್ಣದಕೊಪ್ಪ. | ಶಿಕಾರಿಪುರ ತಾ: | 29493 : 05.10.2000 | ಸಹಕಾರ ಅಭಿವೃದ್ಧಿ ಅಧಿಕಾರಿ, ಶಿಕಾರಿಪುರ. |
| 2 | -ಡು- ಮಳೂರು | -ಡು- | 29532 : 09.01.2000 | -ಡು- |
| 3 | -ಡು- ಕಣಸೋಗಿ | -ಡು- | 29509 : 16.11.2000 | -ಡು- |
| 4 | -ಡು- ಹಿರೇಜಂಬೂರು | -ಡು- | 29448 : 14.08.2000 | -ಡು- |
| 5 | -ಡು- ಮಳವಳ್ಳಿ | -ಡು- | 29449 : 10.10.2000 | -ಡು- |
| 6 | -ಡು- ಮಲ್ಲೇನಹಳ್ಳಿ | -ಡು- | 29502 : 31.10.2000 | -ಡು- |
| 7 | -ಡು- ತೊಗರ್ಸಿ | -ಡು- | 29518 : 13.12.2000 | -ಡು- |
| 8 | -ಡು- ಆನಂದಪುರ | ಸಾಗರ ತಾ: | 29525 : 29.12.2000 | ಮಾರಾಟಾಧಿಕಾರಿ, ಸಹಾಯಕ ನಿಬಂಧಕರ ಕಛೇರಿ, ಸಾಗರ. |
| 9 | -ಡು- ತಾಳಗುಪ್ಪ | -ಡು- | 29533 : 11.01.2000 | -ಡು- |
| 10 | -ಡು- ತ್ಯಾಗರ್ತಿ | -ಡು- | 29497 : 12.10.2000 | -ಡು- |
| 11 | -ಡು- ಕೋಳೂರು | -ಡು- | 29523 : 29.12.2000 | -ಡು- |
| 12 | -ಡು- ಹೊಸೂರು | -ಡು- | 29505 : 19.11.2000 | -ಡು- |
| 13 | -ಡು- ಶಿರವಂತೆ | -ಡು- | 29528 : 22.08.2000 | -ಡು- |
| 14 | -ಡು- ನಾಡಕಲಸಿ | -ಡು- | 29530 : 30.12.2000 | -ಡು- |
| 15 | -ಡು- ಕಾನಲೆ | -ಡು- | 25447 : 14.08.2000 | -ಡು- |
| 16 | -ಡು- ಹೆಗ್ಗೋಡು | -ಡು- | 29491 : 11.09.2000 | -ಡು- |
| 17 | -ಡು- ಗೌತಮಪುರ | -ಡು- | 29514 : 30.11.2000 | -ಡು- |
| 18 | -ಡು- ಮಾಸೂರು | -ಡು- | 29529 : 30.12.2000 | -ಡು- |
| 19 | -ಡು- ಕೆಳದಿ | -ಡು- | 29492 : 05.10.2000 | -ಡು- |
| 20 | -ಡು- ಯವಜಿಗಳಮನೆ | -ಡು- | 29528 : 22.08.2000 | -ಡು- |
| 21 | -ಡು- ಬೆನ್ನೂರು | ಸೊರಬ ತಾ: | 29526 : 30.12.2000 | ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ. |
| 22 | -ಡು- ಶಕುನಹಳ್ಳಿ | -ಡು- | 29546 : 21.04.2001 | -ಡು- |
| 23 | -ಡು- ಹೊಸಬಾಳೆ | -ಡು- | 29503 : 20.10.2000 | -ಡು- |
| 24 | -ಡು- ಶಿಗ್ಗಾ | -ಡು- | 29550 : 30.07.2001 | -ಡು- |
| 25 | -ಡು- ಇಯವಳ್ಳಿ | -ಡು- | 29539 : 20.10.2000 | -ಡು- |
| 26 | -ಡು- ತವನಂದಿ | -ಡು- | 29534 : 20.10.2000 | -ಡು- |
| 27 | -ಡು- ದ್ಯಾವನಹಳ್ಳಿ | -ಡು- | 29507 : 09.11.2000 | -ಡು- |
| 28 | -ಡು- ಮಲ್ಲಾಪುರ | -ಡು- | 20537 : 01.02.2001 | -ಡು- |
| 29 | -ಡು- ಹಳೇಸೊರಬ | -ಡು- | 29515 : 30.11.2000 | -ಡು- |
| 30 | -ಡು- ಮೂಡಿದೊಡ್ಡಕೊಪ್ಪ | -ಡು- | 29552 : 20.10.2000 | -ಡು- |
| 31 | -ಡು- ಮಾವಲಿ | -ಡು- | 29548 : 16.07.2001 | -ಡು- |
| 32 | -ಡು- ಮೂಗೂರು | -ಡು- | 29540 : 27.02.2001 | -ಡು- |
| 33 | -ಡು- ಗುಡ್ಡ | -ಡು- | 29533 : 20.10.2000 | -ಡು- |
| 34 | -ಡು- ನಿಸ್ರಾಣಿ | -ಡು- | 29545 : 12.04.2001 | -ಡು- |
| 35 | -ಡು- ಹೆಚ್ಚೆ | -ಡು- | 29524 : 29.12.2000 | -ಡು- |
| 36 | -ಡು- ಕೊಡಕಣಿ | -ಡು- | 29549 : 18.07.2001 | -ಡು- |
| 37 | -ಡು- ಹಂಚಿ | -ಡು- | 29547 : 16.07.2001 | -ಡು- |
| 38 | -ಡು- ಕುಬಟೂರು | -ಡು- | 29509 : 09.11.2000 | -ಡು- |
| 39 | -ಡು- ಉಳವಿ | -ಡು- | 29513 : 20.10.2000 | -ಡು- |
| 40 | -ಡು- ಓಟೂರು | -ಡು- | 29510 : 17.11.2000 | -ಡು- |
| 41 | -ಡು- ಬಂಕುವಳ್ಳಿ | -ಡು- | 29498 : 20.10.2000 | -ಡು- |
| 42 | -ಡು- ಸಮನಹಳ್ಳಿ | -ಡು- | 29501 : 20.10.2000 | -ಡು- |

**ಕೆ. ಈಶ್ವರಸ್ವಾಮಿ**

ಪಿ.ಆರ್. 1185 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪ್ರಕರಣ ಸಂಖ್ಯೆ: ಕಾನಪ:ಪ್ರ:ಎಫ್:ಸಿಆರ್/28/2005, ದಿನಾಂಕ: 24ನೇ ಜುಲೈ 2005**

**ಅರ್ಜಿದಾರರು :**

1) ನಾಗರತ್ನ
2) ಮನೋಜ್
3) ಟಿ. ಪಾರ್ವತಮ್ಮ

**ಪ್ರತಿವಾದಿಗಳು:**

1) ಎಚ್.ವಿ. ಸೈಫುಲ್ಲಾ, ಟಿ.ಟಿ. ಮಾಲೀಕರು, ಕೆಎ-06/4132-4133, ಕುವೆಂಪುನಗರ, ಹಿರಿಯೂರು.
2) ಓರಿ. ಇನ್. ಕಂ. ಲಿ., ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ 1) ನಾಗರತ್ನ ಎನ್., ಮನೋಜ್, ಟಿ. ಪಾರ್ವತಮ್ಮ ಇವರು, ತಾವು ಮೃತ ಸಿ. ಶಶಿಧರ ಇವರ ಹೆಂಡತಿ, ಮಗ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಿ. ಶಶಿಧರ ಇವರು ಒಂದನೇ ಪ್ರತಿವಾದಿಗಳಾದ ಇವರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 1186

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪ್ರಕರಣ ಸಂಖ್ಯೆ: ಕಾನಪ:ಪ್ರ:ಎಫ್:ಸಿಆರ್/29/2005, ದಿನಾಂಕ: 16ನೇ ಆಗಸ್ಟ್ 2005**

**ಅರ್ಜಿದಾರರು :**

1) ಶ್ರೀಮತಿ ಶೈಲಜ ಎಂ. ಕೋಂ ಕೆ. ಚಂದ್ರಶೇಖರಯ್ಯ C/o ರವಿ ಪ್ರಸಾದ್ ಎಂ., ಬೆಸ್ಕಾಂ, ಬನಶಂಕರಿ ಬಡಾವಣೆ, ವಿದ್ಯಾನಗರ, ದಾವಣಗೆರೆ.

**ಪ್ರತಿವಾದಿಗಳು:**

1) ಕಾರ್ಯನಿರ್ವಾಹಕ ಇಂಜನಿಯರ್ ಕಾ ಮತ್ತು ಪಾ ವಿಭಾಗ, ಬೆಸ್ಕಾಂ, ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ ಶೈಲಜಾ ಇವರು, ತಾವು ಮೃತ ಕೆ. ಚಂದ್ರಶೇಖರಯ್ಯ ಇವರ ಹೆಂಡತಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೆ. ಚಂದ್ರಶೇಖರಯ್ಯ ಇವರು ಒಂದನೇ ಪ್ರತಿವಾದಿಗಳಾದ ಬೆಂಗಳೂರು ವಿದ್ಯುತ್ ಸರಬರಾಜು ಮಂಡಳಿ ಇವರಲ್ಲಿ ಮಾರ್ಗದಾಳು ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 1187

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ :** ಸಮಾಪನೆಗೊಂಡ ಉಡವಗೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮಾಗಡಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ರವರ ಪತ್ರ ಸಂಖ್ಯೆ: ಸಸಸನಿರಾ-46/ಸಮಾಪನೆ/44/95-96, ದಿನಾಂಕ: 16.7.2005.
2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/1/2004-05, ದಿನಾಂಕ: 16.4.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಸಸಸನಿರಾ-46/ನೋಂದಣಿ/18010/1993-94, ದಿನಾಂಕ: 18.10.1993 ರಲ್ಲಿ ನೋಂದಣಿಯಾದ ಉಡವಗೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮಾಗಡಿ ತಾಲ್ಲೂಕು ಈ ಸಂಘವು ನೋಂದಣಿಯಾದ ನಂತರ ಕಾರ್ಯಾರಂಭ ಮಾಡದ ಪ್ರಯುಕ್ತ ಹಾಗೂ ಸಂಘದ ಬೈಲಾ ಉದ್ದೇಶಗಳ ರೀತ್ಯಾ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಇರುವ ಪ್ರಯುಕ್ತ ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಂಡಿರುತ್ತದೆ. ಸಮಾಪನಾಧಿಕಾರಿಗಳು ಸಂಘವು ಹೊಂದಿರುವ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನಲ್ಲಿ ರೂ.1332-27 (ರೂ.ಒಂದು ಸಾವಿರದ ಮೂರುನೂರ ಮುವತ್ತೆರಡು ಮತ್ತು ಇಪ್ಪತ್ತೇಳು ಪೈಸೆ ಮಾತ್ರ) ಗಳನ್ನು ಸದರಿ ಮೊತ್ತವನ್ನು ಸಹಕಾರ ಅಭಿವೃದ್ಧಿ ನಿಧಿ ಉಳಿತಾಯ ಖಾತೆಗೆ ವರ್ಗಾಯಿಸಿರುತ್ತಾರೆಂದು ಹಾಗೂ ಸಂಘದ ದಿನಾಂಕ: 31.3.2003 ರಲ್ಲಿ ಇದ್ದಂತೆ ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯಲ್ಲಿರುವುದಾಗಿ ಹಾಗೂ ಪುನಃಶ್ಚೇತನಗೊಳಿಸಲು ಸಂಘದ ಯಾವುದೇ ಸದಸ್ಯರು ಮುಂದೆ ಬಂದಿಲ್ಲದ

ಕಾರಣ, ಉಡವೆಗೆರೆ ಹಾಲು ಉತ್ಪಾದಕರ ಸಹಕಾರ ಸಂಘವನ್ನು ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವುದು ಸೂಕ್ತವೆಂದು ಉಲ್ಲೇಖ (1) ರಲ್ಲಿ ತಿಳಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಮಾಪನೆಗೊಂಡಿರುವ ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ಸಂಘದ ಸದಸ್ಯರು ಆಸಕ್ತಿ ತೋರಿಸಿರುವುದಿಲ್ಲ. ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸಂಘದ ಸದಸ್ಯರಿಗೆ ಹಾಗೂ ಸಾರ್ವಜನಿಕರಿಗೆ ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/19/2005-06, ದಿನಾಂಕ: 5ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಎಂ. ವೆಂಕಟೇಶಗೌಡ, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಉಡವಗೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಾಗಡಿ ತಾಲ್ಲೂಕು, ಈ ಸಂಘದ ನೋಂದಣಿ ಸಂಖ್ಯೆ: ಸಸಸನಿರಾ-46/ನೋಂದಣಿ/18010/1993-94 ದಿನಾಂಕ: 19.10.1993 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 5.08.2005 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್. 1188 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ :** ಸಮಾಪನೆಗೊಂಡ ಚನ್ನಪಟ್ಟಣ ತಾಲ್ಲೂಕು ಹೂಡಿಕೆ ಹೊಸಹಳ್ಳಿ ಶ್ರೀ ಚನ್ನಪ್ಪಸ್ವಾಮಿ ಮೀನುಗಾರ ಮಹಿಳಾ ಸಹಕಾರ ಸಂಘ ನಿ, ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ರವರ ಪತ್ರ ಸಂಖ್ಯೆ: ಸಸಸನಿರಾ-46/ಸಮಾಪನೆ/90/2004-05, ದಿನಾಂಕ: 3.2.2005.
2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/90/2000-01, ದಿನಾಂಕ: 22.3.2001.
3. ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ: 26.03.2003.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಸಸಸನಿರಾ-46/ನೋಂದಣಿ/28727/2000-01, ದಿನಾಂಕ: 20.5.2000 ರಲ್ಲಿ ನೋಂದಣಿಯಾದ ಚನ್ನಪಟ್ಟಣ ತಾಲ್ಲೂಕು ಹೂಡಿಕೆ ಹೊಸಹಳ್ಳಿ ಶ್ರೀ ಚನ್ನಪ್ಪಸ್ವಾಮಿ ಮೀನುಗಾರ ಮಹಿಳಾ ಸಹಕಾರ ಸಂಘ ನಿ, ಈ ಸಂಘವು ನೋಂದಣಿಯಾದ ನಂತರ ಕಾರ್ಯಾರಂಭ ಮಾಡದ ಪ್ರಯುಕ್ತ ಹಾಗೂ ಸಂಘದ ಬೈಲಾ ಉದ್ದೇಶಗಳ ರೀತ್ಯಾ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಇರುವ ಪ್ರಯುಕ್ತ ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಂಡಿದ್ದು, ಸಮಾಪನೆಗೊಂಡ ನಂತರ ಸಂಘದ ನಿರ್ದೇಶಕರು ಸಮಾಪನಾ ಆದೇಶದ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ನಂ.11618/20001(ಸಿಎಸ್-ಆರ್‌ಇಎಸ್) ನ್ನು ದಾಖಲು ಮಾಡಿದ್ದು, ಕರ್ನಾಟಕ ಉಚ್ಚ ನ್ಯಾಯಾಲಯವು ಈ ಬಗ್ಗೆ ಉಲ್ಲೇಖ (3) ರಲ್ಲಿ ನಮೂದಿಸಿರುವ ದಿನಾಂಕ: 26.03.2003ರ ಆದೇಶದಲ್ಲಿ ಸದರಿ ಅರ್ಜಿಯನ್ನು ವಿಲೇಮಾಡಿ, ಅರ್ಜಿದಾರರು ಈ ಆದೇಶ ದಿನಾಂಕದಿಂದ ಒಂದು ತಿಂಗಳುಗಳೊಳಗಾಗಿ ಅಹವಾಲುಗಳು ಏನಾದರೂ ಇದ್ದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಮುಂದೆ ಅಪೀಲು ಮಾಡಿಕೊಳ್ಳುವಂತೆ ಆದೇಶಿಸಲಾಗಿದೆ. ಅರ್ಜಿದಾರರು ಇಲ್ಲಿಯವರೆಗೆ ಯಾವುದೇ ಅಹವಾಲನ್ನು ದಾಖಲಿಸಿರುವುದಿಲ್ಲ. ಸಮಾಪನಾಧಿಕಾರಿಗಳು ಸದಸ್ಯರ ಷೇರು ಮೊಬಲಗನ್ನು ವಾಪಸ್ಸು ಮಾಡಿ ಆಸ್ತಿ ಜವಾಬ್ದಾರಿಯನ್ನು ಶೂನ್ಯ ಮಾಡಿರುತ್ತಾರೆ. ಸಂಘದ ಸದಸ್ಯರ ಷೇರು ಹಣವನ್ನು ವಾಪಸ್ಸು ಮಾಡಿರುವುದರಿಂದ ಪುನಃಶ್ಚೇತನಗೊಳಿಸಲು ಅವಕಾಶವಿಲ್ಲವೆಂದು ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಮಾಪನೆಗೊಂಡಿರುವ ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ಸಂಘದ ಸದಸ್ಯರು ಆಸಕ್ತಿ ತೋರಿಸಿರುವುದಿಲ್ಲ. ಹಾಗೂ ಸಂಘದ ಸದಸ್ಯರುಗಳಿಗೆ ಷೇರು ಹಣವನ್ನು ಸಮಾಪನಾಧಿಕಾರಿಯವರು ವಾಪಸ್ಸು ನೀಡಿದ್ದು, ಸದರಿ ಸಂಘಕ್ಕೆ ಸರ್ಕಾರದಿಂದ ಯಾವುದೇ ಸಾಲ ಮತ್ತು ಷೇರು ಹಣ ಮಂಜೂರಾಗಿರುವುದಿಲ್ಲ ಹಾಗೂ ಈ ಸಂಘವು ಯಾವುದೇ ಸಂಘ ಸಂಸ್ಥೆ ಮತ್ತು ವಾಣಿಜ್ಯ ಬ್ಯಾಂಕ್‌ಗಳಲ್ಲಿ ಸಾಲ ಮತ್ತು ಷೇರು ಹಣ ಪಡೆದಿರುವುದಿಲ್ಲ.

ಈ ಸಂಘವನ್ನು ಪುನಃಶ್ಚೇತನಗೊಳಿಸಲು ಸಂಘದ ಸದಸ್ಯರು ಯಾರು ಮುಂದೆ ಬರದ ಕಾರಣ ಹಾಗೂ ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸಂಘದ ಸದಸ್ಯರಿಗೆ, ಸಾರ್ವಜನಿಕರಿಗೆ ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/90/2004-05, ದಿನಾಂಕ: 5ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಎಂ. ವೆಂಕಟೇಶಗೌಡ, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಚನ್ನಪಟ್ಟಣ ತಾಲ್ಲೂಕು ಹೂಡಿಕೆ ಹೊಸಹಳ್ಳಿ ಶ್ರೀ ಚನ್ನಪ್ಪಸ್ವಾಮಿ ಮೀನುಗಾರ ಮಹಿಳಾ ಸಹಕಾರ ಸಂಘ ನಿ., ಈ ಸಂಘದ ನೋಂದಣಿ ಸಂಖ್ಯೆ: ಸಸಸನಿರಾ-46/ನೋಂದಣಿ/28727/2000-01 ದಿನಾಂಕ: 20.05.2000 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 5.08.2005 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್. 1189 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ನಿ.441) ಹಾಗೂ ವಸೂಲಾಧಿಕಾರಿಗಳ ಕಛೇರಿ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನಡವಳಿಕೆಗಳು

**ಸಿ.ಇ.ಪಿ. ಸಂಖ್ಯೆ: ಎ.ಆರ್.ಇ/ಯು.ಬಿ.ಎಫ್/2733/2005-06, ದಿನಾಂಕ: 05ನೇ ಆಗಸ್ಟ್ 2005**

**ವಿಷಯ :** ತುಮಕೂರು ವೀರಶೈವ ಕೋ-ಆಪರೇಟಿವ್ ಬ್ಯಾಂಕ್ ಲಿ., ಡಾ: ರಾಧಕೃಷ್ಣ ರಸ್ತೆ, ಎಸ್.ಎಸ್. ಪುರಂ, ತುಮಕೂರು ಇದರ ಅಮಲ್ಜಾರಿ ಅರ್ಜಿ ಸಂಖ್ಯೆ: 489/2004-05ಕ್ಕೆ ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, ನಿಯಮ 38(7) (ಎ) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ :**
1. ದಾವಾ ಸಂಖ್ಯೆ: 799/02-03, ದಿನಾಂಕ: 04.07.2003.
2. ಅಮಲ್ಜಾರಿ ಅರ್ಜಿ ಸಂಖ್ಯೆ: 489/2004-05.
3. ಮಾರಾಟಾಧಿಕಾರಿಯವರ ವರದಿ ದಿನಾಂಕ: 03.05.2005.

**ಪ್ರಸ್ತಾವನೆ:**

ಶ್ರೀ ಡಿ.ಎನ್. ಚಂದ್ರಶೇಖರ್ ಬಿನ್ ನಂಜಪ್ಪ, ಶ್ರೀರಾಜು ನಿಲಯ, ಬ್ರೆಡ್ ಫ್ಯಾಕ್ಟರಿ ಎದುರು, 1ನೇ ಮುಖ್ಯರಸ್ತೆ, ಗಿರಿನಗರ, ಕ್ಯಾತಸಂದ್ರ ಅಂಚೆ, ತುಮಕೂರು ಇವರು ತುಮಕೂರು ವೀರಶೈವ ಕೋ-ಆಪರೇಟಿವ್ ಬ್ಯಾಂಕ್ ಲಿ., ಡಾ: ರಾಧಕೃಷ್ಣ ರಸ್ತೆ, ಎಸ್.ಎಸ್. ಪುರಂ, ತುಮಕೂರು ಈ ಬ್ಯಾಂಕಿನಿಂದ ದಿನಾಂಕ: 11.05.1998 ರಂದು ರೂ.55,000.00 ಗಳನ್ನು (ರೂಪಾಯಿ ಐವತ್ತೈದು ಸಾವಿರ ಮಾತ್ರ) ಸಾಲವಾಗಿ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರನ್ವಯ ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೇ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: 799/02-03 ರಂತೆ ದಾವಾ ಹೂಡಿ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ.

ಸಹಕಾರ ಸಂಘಗಳ ಅಪರ ನಿಬಂಧಕರು (ಕೈ ಮತ್ತು ಇ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರ ನ್ಯಾಯಾಲಯದಿಂದ ಪಡೆದ ಡಿಕ್ರಿಯ ಆದೇಶಾನುಸಾರ ತುಮಕೂರು ವೀರಶೈವ ಸಹಕಾರ ಬ್ಯಾಂಕಿನ ಮುಖ್ಯಕಾರ್ಯನಿರ್ವಹಣಾಧಿಕಾರಿಯವರಿಂದ, ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 34(1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಈ ಕಛೇರಿಯಲ್ಲಿ ಅಮಲ್ಜಾರಿ ಅರ್ಜಿ ಸಂಖ್ಯೆ: 489/2004-05 ರಂತೆ ಕ್ರಮ ಕೈಗೊಳ್ಳಲು ದಾಖಲು ಮಾಡಲಾಗಿತ್ತು. ಸದರಿ ಅಮಲ್ಜಾರಿ ಅರ್ಜಿಯನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರಿಂದ ಅಂತಿಮವಾಗಿ ಅಮಲ್ಜಾರಿ ಕ್ರಮ ಕೈಗೊಂಡು ಸಾಲಕ್ಕೆ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ: 17.03.2005 ರಂದು ಸಾರ್ವಜನಿಕ ಹರಾಜಿಗೆ ತರಲಾಗಿತ್ತು. ಸದರಿ ದಿನ ನಡೆಸಿದ ಹರಾಜಿನಲ್ಲಿ 5 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ ಎಸ್.ಪಿ. ರಾಜೇಶ್ ಬಿನ್ ಲೇ: ಪಾಪಯ್ಯಶೆಟ್ಟಿ, ಮಂಜುನಾಥ ನಿಲಯ, ಈದ್ ಮಹಲ್, ಕುಣಿಗಲ್ ರಸ್ತೆ, ತುಮಕೂರು ಇವರು ರೂ.80,000.00 ಗಳಿಗೆ (ರೂಪಾಯಿ ಎಂಬತ್ತು ಸಾವಿರ ಮಾತ್ರ) ಬಿಡ್ಡು ಮಾಡಿದ್ದು, ಅತೀ ಹೆಚ್ಚಿನ ಬಿಡ್ಡುದಾರರಾಗಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿಯನ್ವಯ ಅಸಲು ರೂ.40,620.00 ಗಳು ಬಡ್ಡಿ ಮತ್ತು ಇತರೆ ವೆಚ್ಚ ರೂ.28,997.00 ಒಟ್ಟು ರೂ.69,617.00 ಗಳು ಬ್ಯಾಂಕಿಗೆ ಬರಬೇಕಾಗಿರುತ್ತದೆ. ರೂ.80,000.00ಗಳ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀ ಎಸ್.ಪಿ. ರಾಜೇಶ್ ಬಿಡ್ಡಿನ ಮೊತ್ತದ ಶೇಕಡಾ 15 ರಷ್ಟು ಮೊತ್ತವಾದ ರೂ.27,000.00 ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿಗೆ ಪಾವತಿಮಾಡಿರುತ್ತಾರೆ. ಉಳಿಕೆ ಬಾಕಿ ಮೊತ್ತ ರೂ.53,000.00 ಗಳನ್ನು ದಿನಾಂಕ: 31.03.2005 ರಂದು ಪಾವತಿ ಮಾಡಿರುತ್ತಾರೆ.

ತುಮಕೂರು ವೀರಶೈವ ಸಹಕಾರ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ: 17.03.2005 ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಶ್ರೀ ಡಿ.ಎನ್. ಚಂದ್ರಶೇಖರ ಬಿನ್ ನಂಜಪ್ಪರವರ ಸ್ಥಿರಾಸ್ತಿಯನ್ನು ಶ್ರೀ ಎಸ್.ಪಿ. ರಾಜೇಶ್ ಬಿನ್ ಶ್ರೀ ಲೇ: ಪಾಪ್ಪಯ್ಯಶೆಟ್ಟಿರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂ ಗೊಳಿಸಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ: 17.03.2005 ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 5 ಜನ ಬಿಡ್ಡುದಾರರು ಭಾಗವಹಿಸಿದ್ದು. ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಎಸ್.ಪಿ. ರಾಜೇಶ್ ಬಿನ್ ಶ್ರೀ ಲೇ: ಪಾಪಯ್ಯಶೆಟ್ಟಿ ಇವರಿಗೆ ರೂ.80,000.00 ಗಳಿಗೆ ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳೊಳಗೆ ಬಾಕಿದಾರರು ವಾದಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ಮರುಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಯಾವುದೇ ಆಕ್ಷೇಪಣೆ ಸಲ್ಲಿಸದೇ ಇರುವುದರಿಂದ ದಿನಾಂಕ: 17.03.2005 ರಂದು ನಡೆಸಲಾದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನು ಬದ್ಧವಾಗಿದೆ ಎಂದು ಕಂಡು ಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

### ಆದೇಶ

ಎಸ್.ಎಸ್. ಕಟಗೇರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7) (ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ: 489/2004-05 ರಲ್ಲಿ ಶ್ರೀ ಬಿ.ಎನ್. ಚಂದ್ರಶೇಖರ್ ಬಿನ್ ಶ್ರೀ ನಂಜಪ್ಪ ಸದಸ್ಯತ್ವ ಸಂಖ್ಯೆ: ಎ 00335 ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ: 17.03.2005 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಎಸ್.ಪಿ. ರಾಜೇಶ್ ಬಿನ್ ಲೇ: ಪಾಪ್ಪಯ್ಯಶೆಟ್ಟಿ, ಮಂಜುನಾಥ ನಿಲಯ,, ಈದ್ ಮಹಲ್, ಕುಣಿಗಲ್ ರಸ್ತೆ, ತುಮಕೂರು ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ.80,000.00 ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ತುಮಕೂರು ನಗರ ಪಿ.ಹೆಚ್. ಕಾಲೋನಿಯಲ್ಲಿರುವ ಮು.ಖಾ.ನಂ. ಹಳೇದು 3787, 3877, ಚಾಲ್ತಿ ನಂ:911/ಎ/1108 ಆಗಿದ್ದು, ಇದರಲ್ಲಿರುವ ಕಟ್ಟಡ ಸೇರಿ ಅಳತೆ ಪೂರ್ವ - ಪಶ್ಚಿಮ 13.3 ಅಡಿ, ಉತ್ತರ - ದಕ್ಷಿಣ 10 ಅಡಿವುಳ್ಳ ಸ್ವತ್ತಿಗೆ ಚಕ್ಕುಬಂದಿ:

ಪೂರ್ವಕ್ಕೆ - ರಸ್ತೆ
ಪಶ್ಚಿಮಕ್ಕೆ - ಚಂದ್ರಮ್ಮನವರ ಬಾಬ್ತು ಸ್ವತ್ತು
ಉತ್ತರಕ್ಕೆ - ಪಾಪಯ್ಯಶೆಟ್ಟಿಯವರ ಅಂಗಡಿ
ದಕ್ಷಿಣಕ್ಕೆ - ಕುಪ್ಪಮ್ಮನವರ ಸ್ವತ್ತು
ಮಾರಾಟದ ಮೊಬಲಗು ರೂ.80,000.00
ಮಾರಾಟ ಮಾಡಿದ ದಿನಾಂಕ: 17.03.2005

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 05.08.2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ನಿ.441) ಹಾಗೂ
ಪಿ.ಆರ್. 1190 ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ
ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

**ಸಹಕಾರ ಇಲಾಖೆ**

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಕಾರ್ಯಾಲಯ**
**ಸಂಖ್ಯೆ: ಡಿಆರ್ಎಸ್:ಸಮಾಪನೆ:ಡಿಎಲ್ಎಸ್:87:2005-06/712, ದಿನಾಂಕ: 30ನೇ ಜುಲೈ 2005**

**ವಿಷಯ :** ನಿಷ್ಕ್ರೀಯಗೊಂಡ ಗ್ರಾಮೀಣ ಗೃಹ ನಿರ್ಮಾಣ ಸಹಕಾರ ಸಂಘ ನಿ., ತೀರ್ಥಹಳ್ಳಿ, ತೀರ್ಥಹಳ್ಳಿ ತಾಲ್ಲೂಕು, ಇದರ ಸಮಾಪನೆ - ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ, ರವರ ಪತ್ರ ಸಂಖ್ಯೆ: ಎಆರ್-24: ಸಮಾಪನೆ:ಸಿಆರ್-31:04-05, ದಿನಾಂಕ: 8.6.2005 ಮತ್ತು 30.6.2005.

ಗ್ರಾಮೀಣ ಗೃಹ ನಿರ್ಮಾಣ ಸಹಕಾರ ಸಂಘ ನಿ., ತೀರ್ಥಹಳ್ಳಿ, ತೀರ್ಥಹಳ್ಳಿ ತಾಲ್ಲೂಕು, ಈ ಸಂಘವು ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಕಾರ್ಯಾಲಯದ ಸಂಖ್ಯೆ: ಎಆರ್ಎಸ್:1136:1958, ದಿನಾಂಕ: 21.8.1958 ರಲ್ಲಿ ನೋಂದಣಿಯಾಗಿದ್ದು, ತಾಲ್ಲೂಕಿನ ಒಂದು ಭಾಗ (ತಾಲ್ಲೂಕಿಗಿಂತ ಕಡಿಮೆ) ಕಾರ್ಯವ್ಯಾಪ್ತಿ ಹೊಂದಿರುವುದಾಗಿ ಹಾಗೂ ಸಂಘದ ನೋಂದಾಯಿತ ಬೈಲಾದಲ್ಲಿಯ ಉದ್ದೇಶಗಳಂತೆ ಕಾರ್ಯಚಟುವಟಿಕೆ ನಡೆಸದೇ ನಿಷ್ಕ್ರಿಯೆಗೊಂಡಿರುವುದಾಗಿ ಉಲ್ಲೇಖಿತ ಪತ್ರದಲ್ಲಿ ವರದಿ ಮಾಡಿರುತ್ತಾರೆ. ಈ ಸಂಘದ ಆಡಳಿತ ಮಂಡಳಿಯವರು ಸಹಕಾರ ಕಾಯ್ದೆ ಅನುಸಾರ ನಿಗದಿತ ಅವಧಿಯೊಳಗೆ ಮುಂದಿನ ಆಡಳಿತ ಮಂಡಳಿಯನ್ನು ರಚಿಸಲು ಚುನಾವಣಾಧಿಕಾರಿ ನೇಮಕ ಮಾಡಿದ್ದು, ಚುನಾವಣೆಯಲ್ಲಿ ಯಾರೂ ನಿರ್ದೇಶಕರಾಗಲು ಉಮೇದುವಾರಿಕೆ ಸಲ್ಲಿಸದ ಪ್ರಯುಕ್ತ, ಆಡಳಿತ ಮಂಡಳಿ ಶೂನ್ಯವಾಗಿದ್ದು, ಪ್ರಯುಕ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ರವರು ಆದೇಶ ಸಂಖ್ಯೆ: ಎಆರ್- 24:ಎಂಕೆಟಿ:ಅ.ನೇ:31:04-05, ದಿನಾಂಕ: 1.4.2005 ರಲ್ಲಿ ವಿಶೇಷಾಧಿಕಾರಿಯನ್ನು ನೇಮಕ ಮಾಡಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ತೀರ್ಥಹಳ್ಳಿ, ಇವರನ್ನು ವಿಶೇಷಾಧಿಕಾರಿಯಾಗಿ ನೇಮಕ ಮಾಡಲಾಗಿದೆ. ವಿಶೇಷಾಧಿಕಾರಿಯವರು ಸಂಘದ ಮೂರು ವರ್ಷಗಳ ಆರ್ಥಿಕ ಪರಿಸ್ಥಿತಿ ಮತ್ತು ವ್ಯವಹಾರವನ್ನು ಪರಿಶೀಲಿಸಿ, ದಿನಾಂಕ: 3.6.2005 ರಂದು ಸಭೆ ನಡೆಸಿ, ಸಂಘವು ನಿಷ್ಕ್ರೀಯಗೊಂಡಿದೆ ಎಂದು ಅಭಿಪ್ರಾಯಪಟ್ಟು, ಸಮಾಪನೆಗೆ ತೀರ್ಮಾನಿಸಿ ಶಿಫಾರಸ್ ಮಾಡಿರುತ್ತಾರೆ. ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ರವರು ಆಡಳಿತಾಧಿಕಾರಿಯವರ ತೀರ್ಮಾನದ ಮೇರೆಗೆ, ಈ ಸಂಘವು ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಅಭಿಪ್ರಾಯಪಟ್ಟು, ಸಮಾಪನೆಗೆ ಶಿಫಾರಸ್ ಮಾಡಿರುತ್ತಾರೆ. ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಶಿಫಾರಸ್ ಮೇರೆಗೆ ಹಾಗೂ ವಿಶೇಷಾಧಿಕಾರಿಯವರ ತೀರ್ಮಾನದ ಮೇರೆಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್ಎಂ 2001, ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರದನ್ವಯ, ಡಿ.ಸಿ. ದೇವರಾಜ್, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು, ಗ್ರಾಮೀಣ ಗೃಹ ನಿರ್ಮಾಣ ಸಹಕಾರ ಸಂಘ ನಿ., ತೀರ್ಥಹಳ್ಳಿ, ತೀರ್ಥಹಳ್ಳಿ ತಾಲ್ಲೂಕು, ಈ ಸಂಘವನ್ನು ಸಮಾಪನೆಗೆ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ತೀರ್ಥಹಳ್ಳಿ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿದ್ದೇನೆ.

ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಪ್ರಭಾರ ವಹಿಸಿಕೊಂಡು ಸಮಾಪನಾ ನಡವಳಿಕೆ ನಡೆಸತಕ್ಕದ್ದು.

ಈ ಆದೇಶವನ್ನು ದಿನಾಂಕ: 30ನೇ ಜುಲೈ 2005 ರಂದು ನನ್ನ ಸ್ವ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಡಿ.ಸಿ. ದೇವರಾಜ್
ಪಿ.ಆರ್. 1191 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರ ನಡವಳಿಕೆಗಳು**

**ಉಪಸ್ಥಿತರು :** ಮಲ್ಲೇಶ್, ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

**ವಿಷಯ :** ಮೋಟಾರು ವಾಹನ ಸಂಖ್ಯೆ: ಕೆಎ-14:ಇ 2972 ನೋಂದಣಿ ಮತ್ತು ನೋಂದಣಿ ಪತ್ರವನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ :** 1) ವಾಹನ ಮಾಲೀಕರ ಅರ್ಜಿ ದಿನಾಂಕ: 07.07.2005.
2) ವಾಹನ ನಿರೀಕ್ಷಕರ ವರದಿ ದಿನಾಂಕ: 27.07.2005.
3) ಎಸ್.ಆರ್. ಸಂ: -

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖದಂತೆ ವಾಹನ ಸಂಖ್ಯೆ: ಕೆಎ-14:ಇ 2972 ಮಾಲೀಕರಾದ ಶ್ರೀಮತಿ ಸುಜಾತ ಪ್ರಭು ಕೋಂ ಪಿ.ಉದಯ, ಕರ್ನಾಟಕ ಬ್ಯಾಂಕ್ ಲಿ., ಎಸ್.ಎನ್. ಮಾರ್ಕೆಟ್ ಬಿಲ್ಡಿಂಗ್, ಶಿವಮೊಗ್ಗ, ಇವರು ದಿನಾಂಕ: 07.07.2005 ರಂದು ವಾಹನ ನೋಂದಣಿ ರದ್ದುಪಡಿಸಲು ಮನವಿ ಮಾಡಿದ್ದಾರೆ. ಹಾಗೂ ಅವಧಿ ಜೀವಾವಧಿ ರವರೆಗೆ ತೆರಿಗೆಯನ್ನು ಪಾವತಿಸಿದ್ದು ಮತ್ತು ವಾಹನ ನಿರೀಕ್ಷಕರು ದಿನಾಂಕ: 27.7.2005 ರಂದು ವಾಹನದ ಸ್ಥಿತಿಗತಿಯ ಬಗ್ಗೆ ವರದಿಯನ್ನು ಸಲ್ಲಿಸಿ, ವಾಹನದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಆದುದರಿಂದ ಈ ಮೇಲೆ ವಿವರಿಸಿರುವ ಅಂಶವನ್ನು ಪರಿಶೀಲಿಸಿ, ಸದರಿ ವಾಹನದ ನೋಂದಣಿಯನ್ನು ರದ್ದುಪಡಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.-

**ಆದೇಶ ಸಂಖ್ಯೆ: ಪ್ರಾಸಾಅ:ಶಿ:ಎಸ್‌ಆರ್:ಕೆಎ-14:ಇ 2972:2005-06, ದಿನಾಂಕ: 29ನೇ ಜುಲೈ 2005**

ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಆದ ನಾನು ನನಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಮೋಟಾರು ವಾಹನ ಸಂಖ್ಯೆ: ಕೆಎ-14:ಇ 2972 ವಾಹನದ ಮೇಲೆ ಏನಾದರೂ ತೆರಿಗೆ ಬಾಕಿ ತನಿಖಾ ಆಕ್ಷೇಪಣೆಗಳು ಇರುವುದು ಕಂಡು ಬಂದಲ್ಲಿ ಸದರಿ ವಾಹನದ ಮಾಲೀಕರೆ ಪಾವತಿಸಬೇಕೆಂದು ಷರತ್ತಿನೊಂದಿಗೆ ನೋಂದಣಿಯನ್ನು ಮೋಟಾರು ವಾಹನ ಕಾಯ್ದೆ 1988ರ ವಿಧಿ 55(2)ರ ಪ್ರಕಾರ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | | |
|---|---|---|---|
| 1) | ವಾಹನದ ಸಂಖ್ಯೆ | : | ಕೆಎ-14:ಇ 2972. |
| 2) | ನೋಂದಣಿ ದಿನಾಂಕ | : | 10.12.1990. |
| 3) | ವಾಹನದ ವರ್ಗ | : | ಮೋಟಾರ್ ಸೈಕಲ್. |
| 4) | ತಯಾರಕರ ಹೆಸರು | : | ವಲ:ಕಿನ್ಸ್ ಹೋಂಡ. |
| 5) | ಅಡಿಗಟ್ಟು ಸಂಖ್ಯೆ | : | ಎನ್‌ಐಎಫ್ ಎಫ್ 185628. |
| 6) | ಯಂತ್ರದ ಸಂಖ್ಯೆ | : | 185084 ಬಿಐ ಇಎಫ್‌ಇ. |
| 7) | ಮಾಲೀಕರು | : | ಶ್ರೀಮತಿ ಸುಜಾತ ಪ್ರಭು, ಕೋಂ ಪಿ. ಉದಯ, ಕರ್ನಾಟಕ ಬ್ಯಾಂಕ್ ಲಿ. ಎಸ್.ಎನ್. ಮಾರ್ಕೆಟ್‌ಬಿಲ್ಡಿಂಗ್, ಶಿವಮೊಗ್ಗ. |

ಪಿ.ಆರ್.1192 ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ**

**ಹಾಜರಿ :** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ :** ಕೆಎ-16:1359 (ಸ್ಟೇ : ಕ್ಯಾ) ಇದರ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** ವಾಹನ ಮಾಲೀಕರು ಶ್ರೀ ಬಿ.ಎಸ್. ರಾಮಸ್ವಾಮಿ ಬಿನ್ ಬಿ.ಎಂ. ಸುಬ್ರಾಯ, ವಿಜಯಪುರ, ಚಿಮ ಇವರ ಅರ್ಜಿ ದಿನಾಂಕ: 18.7.2005.

ವಾಹನ ಸಂಖ್ಯೆ: ಕೆಎ-16:1359 (ಸ್ಟೇ:ಕ್ಯಾ) ವಾಹನದ ನೋಂದಾಯಿತ ಮಾಲೀಕರಾದ ಶ್ರೀ ಬಿ.ಎಸ್. ರಾಮಸ್ವಾಮಿ ಬಿನ್ ಬಿ.ಎಂ. ಸುಬ್ರಾಯ, ಚಿಮ ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ: 31.7.2005 ರವರೆಗೆ ಪಾವತಿಸಿದ್ದು, ದಿನಾಂಕ: 18.7.2005 ರಂದು ಕಛೇರಿಗೆ ಸದರಿ ವಾಹನದ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೋಂದಣಿ ರದ್ದು ಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲೀಕರ ಕೋರಿಕೆಯಂತೆ ಈ ವಾಹನದ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಪ್ರಾಸಾಅ:ಚಿಮ:ಎಫ್‌ಟಿ:ಸಾರಿಗೆ:2004-05, ದಿನಾಂಕ: 19ನೇ ಜುಲೈ 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55 ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂಖ್ಯೆ: ಕೆಎ-16:1359 (ಸ್ಟೇ:ಕ್ಯಾ) ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

| | | | |
|---|---|---|---|
| 1) | ವಾಹನದ ಸಂಖ್ಯೆ | : | ಕೆಎ-16:1359. |
| 2) | ವರ್ಗ | : | ಮಜಲು ವಾಹನ TATA |
| 3) | ಚಾಸಿಸ್ ಸಂಖ್ಯೆ | : | 344050397828. |
| 4) | ಇಂಜಿನ್ ಸಂಖ್ಯೆ | : | 692 ಡಿ 23411535. |
| 5) | ಮಾಡೆಲ್ | : | 1992. |
| 6) | ಹೆಚ್.ಪಿ.ಎ. | : | ಹೊಂದಿರುವುದಿಲ್ಲ. |
| 7) | ಮಾಲೀಕರು | : | ಶ್ರೀ ಬಿ.ಎಸ್. ರಾಮಸ್ವಾಮಿ ಬಿನ್ ಬಿ.ಎಂ. ಸುಬ್ರಾಯ, ವಿಜಯಪುರ ಬಡಾವಣೆ, ಒಕ್ಕಲಿಗರ ಸಮುದಾಯ, ಭವನದ ಹತ್ತಿರ, ಚಿಕ್ಕಮಗಳೂರು. |

**ಆರ್. ರಾಜಶೇಖರ್**

ಪಿ.ಆರ್.1193 ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಚಿಕ್ಕಮಗಳೂರು.

**ಅಬಕಾರಿ ಇಲಾಖೆ**

**ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು (ಇ.ಐ.ಬಿ.) ಬಿಜಾಪೂರ ಜಿಲ್ಲೆ, ಬಿಜಾಪೂರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಇಎಕ್ಸ್‌ಇ:ಬಿಜೆಪಿ:ಡಿಟಿಸಿಆರ್:76/2004-05, ದಿನಾಂಕ: 29ನೇ ಜುಲೈ 2005**

**ಯಾರಿಗೆ ಸಂಬಂಧಿಸಿದೆಯೋ ಅಂಥವರಿಗೆ**

1. ಒಂದು ಬಿಳಿಯ ಬಣ್ಣದ ಟಾಟಾ ಮೊಬೈಲ್-206 ವಾಹನ ನೋಂದಣಿ ಸಂಖ್ಯೆ: ಕೆಎ-31-242, ಚಾಸ್ಸಿ ಸಂಖ್ಯೆ: 371005952490 ವಾಹನದಲ್ಲಿ ಈ ಕೆಳಕಂಡಂತೆ ನಕಲಿ ಮದ್ಯದ ಬಾಟ್ಲಿಗಳನ್ನು ಜಪ್ತಿ ಮಾಡಿ ಅಬಕಾರಿ ಉಪ ನಿರೀಕ್ಷಕರು, ಬಿಜಾಪೂರ ಉಪ ವಿಭಾಗ ಇವರ ಗುನ್ನೆ ಸಂಖ್ಯೆ:05/2004-05, ದಿನಾಂಕ: 20.03.2005.

| | | | |
|---|---|---|---|
| 1. | ಬೂನಿ ಸ್ಕಾಟ ವಿಸ್ಕಿ | 180 ಎಂಎಲ್‌ದ | 21 ಬಾಟ್ಲಿಗಳು |
| 2. | ಮ್ಯಾಕಡೆವಲ್ ರಮ್ | 180 ಎಂಎಲ್‌ದ | 134 ಬಾಟ್ಲಿಗಳು |
| 3. | ಓಲ್ಡ್‌ಮಂಕ್ ರಮ್ | 180 ಎಂಎಲ್‌ದ | 182 ಬಾಟ್ಲಿಗಳು |
| 4. | ಓಲ್ಡಟವರಿನ ವಿಸ್ಕಿ | 180 ಎಂಎಲ್‌ದ | 48 ಬಾಟ್ಲಿಗಳು |
| 5. | ಮ್ಯಾಕಡವೆಲ್ ವಿಸ್ಕಿ | 180 ಎಂಎಲ್‌ದ | 39 ಬಾಟ್ಲಿಗಳು |
| 6. | ಬ್ಯಾಗಪೈಪರ್ ವಿಸ್ಕಿ | 180 ಎಂಎಲ್‌ದ | 04 ಬಾಟ್ಲಿಗಳು |
| 7. | ಓರಿಜಿನಲ್ ಚಾಯಿಸ್ ವಿಸ್ಕಿ | 180 ಎಂಎಲ್‌ದ | 160 ಬಾಟ್ಲಿಗಳು |

ಮೇಲ್ಕಂಡ ಪ್ರಕರಣದಲ್ಲಿ ಅನಧೀಕೃತವಾಗಿ ದೇಶಿಯಾದ ವಿದೇಶಿ ನಕಲಿ ಮದ್ಯವನ್ನು ಸಾಗಾಣಿಕೆ ಮಾಡುತ್ತಿದ್ದಾಗ ಮೊಕದ್ದಮೆ ಸಂಖ್ಯೆ:05/2004-05, ದಿನಾಂಕ: 21.03.2005 ರಂತೆ ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ಉಪ ವಿಭಾಗ ಇವರು ಜಪ್ತು ಮಾಡಿದ್ದು, ಮೇಲೆ ತೋರಿಸಿದ ವಾಹನದ ಮಾಲೀಕರು ಜಪ್ತು ಮಾಡಿದ ದೇಶಿಯಾದ ವಿದೇಶಿ ನಕಲಿ ಮದ್ಯ ಮತ್ತು ಜಪ್ತು ಮಾಡಿದ ವಾಹನದ ಬಗ್ಗೆ ಮಾಲೀಕತ್ವವನ್ನು ನಿರೂಪಿಸಲು ಸಂಬಂಧಿಸಿದ ದಾಖಲೆಗಳನ್ನು ರಾಜ್ಯ ಸರ್ಕಾರದ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಆದ ದಿನಾಂಕದಿಂದ 15 ದಿನಗಳ ಒಳಗೆ ನಿರೂಪಿಸತಕ್ಕದ್ದು. ಹಾಗೊಂದು ವೇಳೆ ನಿಗದಿತ ಅವಧಿಯೊಳಗೆ ಯಾರೇ ಆಗಲಿ ಮುಂದೆ ಬಂದು ತಮ್ಮ ಹಕ್ಕನ್ನು ಜಪ್ತು ಮಾಡಿದ ಮುದ್ದೇಮಾಲನ್ನು ಮತ್ತು ವಾಹನದ ಮೇಲೆ ಸ್ಥಾಪಿಸದಿದ್ದಲ್ಲಿ ಜಪ್ತು ಮಾಡಿದ ವಾಹನ ಮತ್ತು ಮದ್ಯವನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಮತ್ತು 43(ಸಿ) ರಂತೆ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಕೈಗೊಳ್ಳಲಾಗುವುದು. ತಡವಾಗಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲಾ.

ಈ ಪತ್ರಿಕಾ ಪ್ರಕಟಣೆಯನ್ನು ದಿನಾಂಕ: 29.07.2005 ರಂದು ನನ್ನ ಸಹಿ ಮತ್ತು ಮೊಹರು ಹಾಕಿ ನೀಡಲಾಗಿದೆ.

**ಕೆ.ಆರ್. ಗೌಡ್ರ**

ಪಿ.ಆರ್. 1196 ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು (ಇ.ಐ.ಬಿ.), ಬಿಜಾಪೂರ ಜಿಲ್ಲೆ.

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರ ನಡವಳಿಕೆಗಳು**

**ಉಪಸ್ಥಿತರು :** ಮಲ್ಲೇಶ್, ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

**ವಿಷಯ :** ಮೋಟಾರು ವಾಹನ ಸಂಖ್ಯೆ: ಕೆಎ-14:ಜಿ 242 ನೋಂದಣಿ ಮತ್ತು ನೋಂದಣಿ ಪತ್ರವನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ :** 1) ವಾಹನ ಮಾಲೀಕರ ಅರ್ಜಿ ದಿನಾಂಕ:
2) ವಾಹನ ನಿರೀಕ್ಷಕರ ವರದಿ ದಿನಾಂಕ: 21.8.2004
3) ಎಸ್.ಆರ್. ಸಂ: -

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖದಂತೆ ವಾಹನ ಸಂಖ್ಯೆ: ಕೆಎ-14:ಜಿ 242 ಮಾಲೀಕರಾದ ಶ್ರೀ ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ. ಮಾಚೇನಹಳ್ಳಿ, ಶಿವಮೊಗ್ಗ ಇವರು ದಿನಾಂಕ: 22.7.2005 ರಂದು ವಾಹನ ನೋಂದಣಿ ರದ್ದುಪಡಿಸಲು ಮನವಿ ಮಾಡಿದ್ದಾರೆ. ಹಾಗೂ ಅವಧಿ 31.12.2005 ರವರೆಗೆ ತೆರಿಗೆ ವಿನಾಯಿತಿ ಪಡೆದಿದೆ ಮತ್ತು ವಾಹನ ನಿರೀಕ್ಷಕರು ದಿನಾಂಕ: 21.8.2004 ರಂದು ವಾಹನದ ಸ್ಥಿತಿಗತಿಯ ಬಗ್ಗೆ ವರದಿಯನ್ನು ಸಲ್ಲಿಸಿ, ವಾಹನದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಆದುದರಿಂದ ಈ ಮೇಲೆ ವಿವರಿಸಿರುವ ಅಂಶವನ್ನು ಪರಿಶೀಲಿಸಿ, ಸದರಿ ವಾಹನದ ನೋಂದಣಿಯನ್ನು ರದ್ದುಪಡಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಪ್ರಾಸಾಅ:ಶಿ:ಎಸ್‌ಆರ್:ಕೆಎ-14:ಜಿ 242:2005-06, ದಿನಾಂಕ: 2ನೇ ಆಗಸ್ಟ್ 2005**

ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಆದ ನಾನು ನನಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಮೋಟಾರು ವಾಹನ ಸಂಖ್ಯೆ: ಕೆಎ-14:ಜಿ 242 ವಾಹನದ ಮೇಲೆ ಏನಾದರೂ ತೆರಿಗೆ ಬಾಕಿ ತನಿಖಾ ಆಕ್ಷೇಪಣೆಗಳು ಇರುವುದು ಕಂಡು ಬಂದಲ್ಲಿ ಸದರಿ ವಾಹನದ ಮಾಲೀಕರೆ ಪಾವತಿಸಬೇಕೆಂದು ಷರತ್ತಿನೊಂದಿಗೆ ನೋಂದಣಿಯನ್ನು ಮೋಟಾರು ವಾಹನ ಕಾಯ್ದೆ 1988ರ ವಿಧಿ 55(2)ರ ಪ್ರಕಾರ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | | |
|---|---|---|---|
| 1) | ವಾಹನದ ಸಂಖ್ಯೆ | : | ಕೆಎ-14:ಜಿ 242. |
| 2) | ನೋಂದಣಿ ದಿನಾಂಕ | : | 31.1.1994. |
| 3) | ವಾಹನದ ವರ್ಗ | : | ಎಲ್.ಎಂ.ವಿ. |
| 4) | ತಯಾರಕರ ಹೆಸರು | : | ಮಹೇಂದ್ರ ಅಂಡ್ ಮಹೇಂದ್ರ ಲಿ., |
| 5) | ಅಡಿಗಚ್ಚು ಸಂಖ್ಯೆ | : | ಕಮಾಂಡರ್ 2 ಡಿಆರ್ 10484 |
| 6) | ಯಂತ್ರದ ಸಂಖ್ಯೆ | : | ಡಿಆರ್ 10484 |
| 7) | ಮಾಲೀಕರು | : | ಶ್ರೀ ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ. ಮಾಚೇನಹಳ್ಳಿ, ಶಿವಮೊಗ್ಗ. |

ಪಿ.ಆರ್.1194 ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

## ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರ ನಡವಳಿಕೆಗಳು

**ಉಪಸ್ಥಿತರು :** ಕೆ. ನಾಗರಾಜ್, ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ (ಪ್ರಭಾರ), ಶಿವಮೊಗ್ಗ.

**ವಿಷಯ :** ಮೋಟಾರು ವಾಹನ ಸಂಖ್ಯೆ: ಎಂಇಎಸ್-9513:05-06 ನೋಂದಣಿ ಮತ್ತು ನೋಂದಣಿ ಪತ್ರವನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ :** 1) ವಾಹನ ಮಾಲೀಕರ ಅರ್ಜಿ ದಿನಾಂಕ: 25.5.2005.

2) ವಾಹನ ನಿರೀಕ್ಷಕರ ವರದಿ ದಿನಾಂಕ: 24.6.2005.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖದಂತೆ ವಾಹನ ಸಂಖ್ಯೆ: ಎಂಇಎಸ್-9513 ಮಾಲೀಕರಾದ ಶ್ರೀ ಆರ್.ಟಿ. ರಂಗನಾಥ್ ಬಿನ್ ಆರ್.ಟಿ. ತುಳಜಪ್ಪ, ಟೈಲರ್, ತುಳಜಾಭವಾನಿ ದೇವಸ್ಥಾನದ ರೋಡ್, ಶಿವಮೊಗ್ಗ ಇವರು ದಿನಾಂಕ: 25.5.2005 ರಂದು ವಾಹನ ನೋಂದಣಿ ರದ್ದುಪಡಿಸಲು ಮನವಿ ಮಾಡಿದ್ದಾರೆ. ಹಾಗೂ ಅವಧಿ ಜೀವಾವಧಿ ರವರೆಗೆ ತೆರಿಗೆಯನ್ನು ಪಾವತಿಸಿದ್ದು ಮತ್ತು ವಾಹನ ನಿರೀಕ್ಷಕರು ದಿನಾಂಕ: 24.6.2005 ರಂದು ವಾಹನದ ಸ್ಥಿತಿಗತಿಯ ಬಗ್ಗೆ ವರದಿಯನ್ನು ಸಲ್ಲಿಸಿ, ವಾಹನದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಆದುದರಿಂದ ಈ ಮೇಲೆ ವಿವರಿಸಿರುವ ಅಂಶವನ್ನು ಪರಿಶೀಲಿಸಿ, ಸದರಿ ವಾಹನದ ನೋಂದಣಿಯನ್ನು ರದ್ದುಪಡಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಪ್ರಾಸಾಅ:ಶಿ:ಎಸ್ಆರ್:ಎಂಇಎಸ್-9513:2005-06, ದಿನಾಂಕ: 8ನೇ ಜುಲೈ 2005**

ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಆದ ನಾನು ನನಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಮೋಟಾರು ವಾಹನ ಸಂಖ್ಯೆ: ಎಂಇಎಸ್-9513 ವಾಹನದ ಮೇಲೆ ಏನಾದರೂ ತೆರಿಗೆ ಬಾಕಿ ತನಿಖಾ ಆಕ್ಷೇಪಣೆಗಳು ಇರುವುದು ಕಂಡು ಬಂದಲ್ಲಿ ಸದರಿ ವಾಹನದ ಮಾಲೀಕರೆ ಪಾವತಿಸಬೇಕೆಂದು ಷರತ್ತಿನೊಂದಿಗೆ ನೋಂದಣಿಯನ್ನು ಮೋಟಾರು ವಾಹನ ಕಾಯ್ದೆ 1988ರ ವಿಧಿ 55(2)ರ ಪ್ರಕಾರ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | | |
|---|---|---|---|
| 1) | ವಾಹನದ ಸಂಖ್ಯೆ | : | ಎಂಇಎಸ್-9513. |
| 2) | ನೋಂದಣಿ ದಿನಾಂಕ | : | 28.8.1981 |
| 3) | ವಾಹನದ ವರ್ಗ | : | ಮೋಟಾರ್ ಸೈಕಲ್ |
| 4) | ತಯಾರಕರ ಹೆಸರು | : | ಸುವೇಗ್‌ಮೋಪೆಡ್. |
| 5) | ಅಡಿಗಚ್ಚು ಸಂಖ್ಯೆ | : | 10166612. |
| 6) | ಯಂತ್ರದ ಸಂಖ್ಯೆ | : | 156612. |
| 7) | ಮಾಲೀಕರು | : | ಶ್ರೀ ಆರ್.ಟಿ. ರಂಗನಾಥ್ ಬಿನ್ ಆರ್.ಟಿ. ತುಳಜಪ್ಪ, ಟೈಲರ್, ತುಳಜಭವಾನಿ ದೇವಸ್ಥಾನ ರೋಡ್, ಶಿವಮೊಗ್ಗ. |

ಪಿ.ಆರ್.1195

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

## ಕರ್ನಾಟಕ ರಾಜ್ಯ ಪತ್ರಾಗಾರ
## ನಿರ್ದೇಶಕರ ಕಛೇರಿ, ಕರ್ನಾಟಕ ರಾಜ್ಯ ಪತ್ರಾಗಾರ, ವಿಧಾನ ಸೌಧ, ಬೆಂಗಳೂರು.
## ಕಛೇರಿ ಆದೇಶ

**ಸಂಖ್ಯೆ: ಎಆರ್ಎಸ್ 40 ಎಡಿಎಂ 2003-04, ದಿನಾಂಕ: 29ನೇ ಜುಲೈ 2005**

**ವಿಷಯ:** ಮಾಹಿತಿ ಹಕ್ಕು ಕಾಯಿದೆ (2005 ಕೇಂದ್ರ ಕಾಯ್ದೆ ಸಂಖ್ಯೆ: 22) ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ವಿಧಾನ ಸೌಧ, ಬೆಂಗಳೂರು, ಇವರ ಕಛೇರಿಗೆ ಸಂಬಂಧಿಸಿದಂತೆ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಮಾಹಿತಿ ಅಧಿಕಾರಿ

**ಮತ್ತು**

2005 ಮಾಹಿತಿ ಹಕ್ಕು ಕಾಯಿದೆ ಸೆಕ್ಷನ್ (19)ರ ಅಡಿಯಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ನಿರ್ದೇಶಕರು ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಥಮ ಮೇಲ್ಮನವಿ ಪ್ರಾಧಿಕಾರರನ್ನು ಈ ಕೆಳಗಿನಂತೆ ನೇಮಿಸಿ ಆದೇಶ ಹೊರಡಿಸಲಾಗಿದೆ.

| ರಾಜ್ಯ ಪತ್ರಾಗಾರ ಕಛೇರಿ, ಬೆಂಗಳೂರು. | | |
|---|---|---|
| ೧. | ಸಹಾಯಕ ಸಾರ್ವಜನಿಕ ಅಧಿಕಾರಿ | **ಆಡಳಿತ ಅಧಿಕಾರಿಗಳು:**<br>ಕರ್ನಾಟಕ ರಾಜ್ಯ ಪತ್ರಾಗಾರ,<br>ಕೊಠಡಿ ಸಂ:೧೧, ವಿಧಾನ ಸೌಧ,<br>**ಬೆಂಗಳೂರು-560001.**<br>**ದೂರವಾಣಿ ಸಂ: 0820-22092350** |
| ೨. | ಸಾರ್ವಜನಿಕ ಮಾಹಿತಿ ಅಧಿಕಾರಿ | **೧. ಪತ್ರಪಾಲಕರು, ಚಾರಿತ್ರಿಕ ದಾಖಲೆ ವಿಭಾಗ:**<br>ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ,<br>ಕೊಠಡಿ ಸಂ:೧೧, ವಿಧಾನ ಸೌಧ,<br>**ಬೆಂಗಳೂರು-560001.**<br>**ದೂರವಾಣಿ ಸಂ: 0820-22257090** |

| | | |
|---|---|---|
| | | **೨. ಪತ್ರಪಾಲಕರು, ಸಾರ್ವತ್ರಿಕ ದಾಖಲೆ ವಿಭಾಗ:**<br>ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ,<br>ಕೊಠಡಿ ಸಂ:೧೧, ವಿಧಾನ ಸೌಧ,<br>**ಬೆಂಗಳೂರು_560001.**<br>**ದೂರವಾಣಿ ಸಂ: 0820-22257090** |
| | | **೩. ಪತ್ರಪಾಲಕರು, ಪರಿವೀಕ್ಷಣೆ ವಿಭಾಗ:**<br>ಪತ್ರಾಗಾರ ಕಛೇರಿ, ಪೋಡಿಯಂ ಬ್ಲಾಕ್,<br>ವಿಶ್ವೇಶ್ವರಯ್ಯ ಗೋಪುರ, ಅಂಬೇಡ್ಕರ್ ವೀದಿ,<br>**ಬೆಂಗಳೂರು–560001.**<br>**ದೂರವಾಣಿ ಸಂ: 0820-22863572** |
| ೩. | ಮೇಲ್ಮನವಿ ಪ್ರಾಧಿಕಾರಿ: | **ನಿರ್ದೇಶಕರು:**<br>ಕರ್ನಾಟಕ ರಾಜ್ಯ ಪತ್ರಾಗಾರ,<br>ಕೊಠಡಿ ಸಂ:೯, ವಿಧಾನ ಸೌಧ,<br>**ಬೆಂಗಳೂರು–560001.**<br>**ದೂರವಾಣಿ ಸಂ: 0820-22254465** |
| **ಮೈಸೂರು ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು.** | | |
| ೧. | ಸಹಾಯಕ ಸಾರ್ವಜನಿಕ ಅಧಿಕಾರಿ: | **ಸಹ ಪತ್ರಪಾಲಕರು:**<br>ಉಪ ನಿರ್ದೇಶಕರ ಕಛೇರಿ<br>ಮೈಸೂರು ಘಟಕ, ಅರಮನೆ ಆವರಣ,<br>ಮೈಸೂರು–570 001.<br>**ದೂರವಾಣಿ ಸಂ: 0821-2425671** |
| ೨. | ಸಾರ್ವಜನಿಕ ಮಾಹಿತಿ ಅಧಿಕಾರಿ: | **ಪತ್ರಪಾಲಕರು:**<br>ಉಪ ನಿರ್ದೇಶಕರ ಕಛೇರಿ<br>ಮೈಸೂರು ಘಟಕ, ಅರಮನೆ ಆವರಣ,<br>**ಮೈಸೂರು–570 001**.<br>**ದೂರವಾಣಿ ಸಂ: 0821-2425671** |
| ೩. | ಮೇಲ್ಮನವಿ ಪ್ರಾಧಿಕಾರಿ: | **ನಿರ್ದೇಶಕರು:**<br>ಕರ್ನಾಟಕ ರಾಜ್ಯ ಪತ್ರಾಗಾರ,<br>ಕೊಠಡಿ ಸಂ:೯, ವಿಧಾನ ಸೌಧ,<br>**ಬೆಂಗಳೂರು–560001.**<br>**ದೂರವಾಣಿ ಸಂ: 0820-22254465** |
| **ಧಾರವಾಡ ವಿಭಾಗೀಯ ಪತ್ರಾಗಾರ ಕಛೇರಿ, ಧಾರವಾಡ** | | |
| ೧. | ಸಹಾಯಕ ಸಾರ್ವಜನಿಕ ಅಧಿಕಾರಿ | **ಹಿರಿಯ ದಾಖಲೆ ಸಹಾಯಕರು:**<br>ವಿಭಾಗೀಯ ಪತ್ರಾಗಾರ ಕಛೇರಿ,<br>ಕರ್ನಾಟಕ ವಿಶ್ವವಿದ್ಯಾಲಯ, ಕನ್ನಡ ಅಧ್ಯಯನ ಪೀಠ,<br>**ಧಾರವಾಡ–580003.**<br>**ದೂರವಾಣಿ ಸಂ: 0836-2447477** |
| ೨. | ಸಾರ್ವಜನಿಕ ಮಾಹಿತಿ ಅಧಿಕಾರಿ | **ಪತ್ರ ಪಾಲಕರು:**<br>ವಿಭಾಗೀಯ ಪತ್ರಾಗಾರ ಕಛೇರಿ,<br>ಕರ್ನಾಟಕ ವಿಶ್ವವಿದ್ಯಾಲಯ, ಕನ್ನಡ ಅಧ್ಯಯನ ಪೀಠ,<br>**ಧಾರವಾಡ–580003.**<br>**ದೂರವಾಣಿ ಸಂ: 0836- 2447477** |
| ೩. | ಮೇಲ್ಮನವಿ ಪ್ರಾಧಿಕಾರಿ: | **ನಿರ್ದೇಶಕರು:**<br>ಕರ್ನಾಟಕ ರಾಜ್ಯ ಪತ್ರಾಗಾರ,<br>ಕೊಠಡಿ ಸಂ:೯, ವಿಧಾನ ಸೌಧ,<br>**ಬೆಂಗಳೂರು–560001.**<br>**ದೂರವಾಣಿ ಸಂ: 22254465** |

**ನಿರ್ದೇಶಕರು (ಪ್ರ),**
ಕರ್ನಾಟಕ ರಾಜ್ಯ ಪತ್ರಾಗಾರ.

ಪಿ.ಆರ್. 1197

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು

**ವಿಷಯ :** ಶ್ರೀ ತಾತ್ಯಾರಾಮ ಅನ್ನಪ್ಪ ಕಾಂಬಳೆ, ಅರೆ-ವೈದ್ಯಕೀಯ ಕಾರ್ಯಕರ್ತರು, ರಾಷ್ಟ್ರೀಯ ಕುಷ್ಠ ರೋಗ ನಿಯಂತ್ರಣ ಘಟಕ, ಚಿಕ್ಕೋಡಿ, ಇವರ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ.

**ಉಲ್ಲೇಖ :**
1) ನಿರ್ದೇಶನಾಲಯದ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಎನ್(12)ಸಿಆರ್:100:01-02, ದಿನಾಂಕ: 23.08.2002.
2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್(10)ಸಿಆರ್:100:01-02, ದಿನಾಂಕ: 12.12.2002.
3) ವಿಚಾರಣಾ ವರದಿ ಸಂಖ್ಯೆ: ಮುಜಾಅ:ಜಾಕೋ:ಎನ್‌ಜಿ:230:02-03, ದಿನಾಂಕ: 19.8.2004.
4) ವಿಚಾರಣಾ ವರದಿಯನ್ನು ನೌಕರರಿಗೆ ಜಾರಿ ಮಾಡಿದ ದಿನಾಂಕ: 25.10.2004.
5) ಜಿಲ್ಲಾ ಆರೋಗ್ಯ ಮತ್ತು ಕುಕ ಅಧಿಕಾರಿಗಳು, ಬೆಳಗಾವಿ ಇವರು ನೌಕರರಿಗೆ ಜಾರಿ ಮಾಡಿದ ವಿಚಾರಣಾ ವರದಿ ದಿನಾಂಕ: 12.11.2004.
6) ನೌಕರರು ಎರಡನೇ ಕಾರಣ ಕೇಳುವ ನೋಟೀಸಿಗೆ ಸ್ಪಂದಿಸದೇ ಇದ್ದುದರಿಂದ ನೀಡಿದ ಪತ್ರಿಕಾ ಪ್ರಕಟಣೆ ದಿನಾಂಕ: 1.6.2005.

**ಪ್ರಸ್ತಾವನೆ:**

ಶ್ರೀ ತಾತ್ಯಾರಾಮ ಅನ್ನಪ್ಪ ಕಾಂಬಳೆ, ಅರೆ ವೈದ್ಯಕೀಯ ಕಾರ್ಯಕರ್ತ, ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಘಟಕ, ಚಿಕ್ಕೋಡಿ, ಇವರು ಸರ್ಕಾರಿ ಸೇವೆಗೆ ದಿನಾಂಕ: 12.3.91 ರಿಂದ ಇಲ್ಲಿಯವರೆಗೆ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದು ಸಕ್ಷಮ ಪ್ರಾಧಿಕಾರದ ಮಂಜೂರಾತಿ ಪಡೆಯದೇ ಅಥವಾ ಪೂರ್ವಾನುಮತಿ ಪಡೆಯದೇ ಗೈರು ಹಾಜರಾಗಿರುವ ಬಗ್ಗೆ ಕಾರಣ ಕೇಳುವ ನೋಟೀಸು ಜಾರಿ ಮಾಡಿದ್ದು, ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ, ನೌಕರರ ಗೈರು ಹಾಜರಿ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸಲಾಗಿದ್ದು ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಗೆ ನೌಕರರು ಹಾಜರಾಗದೇ ಇದ್ದುದರಿಂದ ಏಕಪಕ್ಷೀಯವಾಗಿ ಆರೋಪವು ಸಾಬೀತಾಗಿರುವುದಾಗಿ ನಿರ್ಣಯ ನೀಡಿರುತ್ತಾರೆ. ನೌಕರರಿಗೆ ಎರಡನೇ ಕಾರಣ ಕೇಳುವ ನೋಟೀಸು ಜಾರಿ ಮಾಡಲಾಗಿದ್ದು, ನೌಕರರು ಲಿಖಿತ ಹೇಳಿಕೆ ನೀಡಿರುವುದಿಲ್ಲ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಬೆಳಗಾವಿರವರು ಸಹಾ ವಿಚಾರಣಾ ವರದಿಯನ್ನು ಜಾರಿ ಮಾಡಿದ್ದು ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ. ಈ ಸಂಬಂಧವಾಗಿ ಪತ್ರಿಕಾ ಪ್ರಕಟಣೆ ನೀಡಲಾಗಿದ್ದು ಪತ್ರಿಕಾ ಪ್ರಕಟಣೆಯ ನಂತರವು, ನೌಕರರು ಸ್ಪಂಧಿಸಿರುವುದಿಲ್ಲ. ಶಿಸ್ತು ಪ್ರಾಧಿಕಾರವು ನೌಕರರು ಪತ್ರಿಕಾ ಪ್ರಕಟಣೆಯ ನಂತರವು ತಮ್ಮ ಹೇಳಿಕೆ ನೀಡಲು ಪ್ರಯತ್ನಿಸಿಲ್ಲದಿರುವುದರಿಂದ ಹಾಗೂ ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗಿರುವುದರಿಂದ ಸೇವೆಯಿಂದ ವಜಾ ಮಾಡುವ ತೀರ್ಮಾನ ತೆಗೆದುಕೊಂಡಿದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಡಿಪಿಎಸ್(12)ಸಿಆರ್:100:2001-02, ದಿನಾಂಕ: 19ನೇ ಜುಲೈ 2005**

ಮೇಲೆ ವಿವರಿಸಿರುವ ಕಾರಣಗಳಿಂದ 1957ರ ಕೆಸಿಎಸ್(ಸಿಸಿಎ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ತಾತ್ಯಾರಾಮ ಅನ್ನಪ್ಪ ಕಾಂಬಳೆ, ಅರೆ ವೈದ್ಯಕೀಯ ಕಾರ್ಯಕರ್ತ, ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಘಟಕ, ಚಿಕ್ಕೋಡಿ, ಬೆಳಗಾವಿ ಜಿಲ್ಲೆ ಇವರ ವಿರುದ್ಧ ಅನಧಿಕೃತ ಗೈರು ಹಾಜರಿ ಆರೋಪವು ಸಾಬೀತಾಗಿರುವುದರಿಂದ ಕೆಸಿಎಸ್ (ಸಿಸಿಎ) ನಿಯಮ 8(8)ರ ಅಡಿಯಲ್ಲಿ ಸೇವೆಯಿಂದ ವಜಾ ಮಾಡಲಾಗಿದೆ.

**ಮಹಮದ್ ಸನಾವುಲ್ಲಾ**
ಆಯುಕ್ತರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

ಪಿ.ಆರ್. 1198

## ಉಡುಪಿ ತಾಲ್ಲೂಕು ದಂಡಾಧಿಕಾರಿ, ಉಡುಪಿ ತಾಲ್ಲೂಕು, ಉಡುಪಿ ಇವರ ಅಧಿಸೂಚನೆ

**ಸಂಖ್ಯೆ: ಎಂಎಜಿ:ಸಿಆರ್:69:2005-06, ದಿನಾಂಕ: 10ನೇ ಆಗಸ್ಟ್ 2005**

ಉಡುಪಿ ತಾಲ್ಲೂಕು, ಕಾಪು ಹೋಬಳಿ ಎಲ್ಲೂರು ಗ್ರಾಮದಲ್ಲಿ ದಿನಾಂಕ: 10.8.2005 ರಿಂದ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯವರು ಭೂಸ್ವಾಧೀನಪಡಿಸಿಕೊಂಡ ಜಮೀನಿನ ಸರ್ವೆ ಹಾಗೂ ಸದ್ರಿ ಜಮೀನಿನಲ್ಲಿರುವ ಕಟ್ಟಡ ಹಾಗೂ ಮರಗಳ ಮೌಲ್ಯ ಮಾಪನ ಕಾರ್ಯವನ್ನು ನಡೆಸಲು ಮುಂಜಾಗ್ರತಾ ಕ್ರಮವಾಗಿ ಕಾನೂನು ಸುವ್ಯವಸ್ಥೆ, ಸಾರ್ವಜನಿಕ ಶಿಸ್ತು ಹಾಗೂ ಶಾಂತಿಪಾಲನೆಯ ಹಿತದೃಷ್ಟಿಯಿಂದ 1973ರ ಕ್ರಿಮಿನಲ್ ಪ್ರೊಸಿಜರ್ ಕೋಡ್‌ನ ಸೆಕ್ಷನ್ 144 ರಂತೆ ದಿನಾಂಕ: 10.8.2005 ಪೂರ್ವಾಹ್ನ 6.00 ಗಂಟೆಯಿಂದ ದಿನಾಂಕ: 16.8.2005ರ ಸಂಜೆ 6.00 ಗಂಟೆಯವರೆಗೆ ದಿನಾಂಕ: 9.8.2005ರ ಅಧಿಸೂಚನೆಯಂತೆ ಉಡುಪಿ ತಾಲ್ಲೂಕು ಕಾಪು ಹೋಬಳಿ ವ್ಯಾಪ್ತಿಗೆ ಅನ್ವಯವಾಗುವಂತೆ ನಿಷೇದಾಜ್ಞೆಯನ್ನು ಹೊರಡಿಸಲಾಗಿತ್ತು.

ದಿನಾಂಕ: 10.8.2005 ರಂದು ಸದರಿ ಜಮೀನಿನಲ್ಲಿರುವ ಕಟ್ಟಡ ಹಾಗೂ ಮರಗಳ ಮೌಲ್ಯಮಾಪನ ಕಾರ್ಯವು ವಿವಿಧ ಇಲಾಖಾಧಿಕಾರಿಗಳ ಸಹಕಾರದೊಂದಿಗೆ ಮುಕ್ತಾಯವಾಗಿದ್ದು ಆ ಪ್ರದೇಶಗಳಲ್ಲಿ ನಿಷೇದಾಜ್ಞೆಯನ್ನು ಹಿಂತೆಗೆದುಕೊಳ್ಳಬಹುದಾಗಿ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಯವರು ವರದಿ ನೀಡಿದ್ದು ಈ ಹಿನ್ನೆಲೆಯಲ್ಲಿ ಕೆ. ಮುರಳೀಧರ, ತಾಲ್ಲೂಕು ದಂಡಾಧಿಕಾರಿ ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ ಆದ ನಾನು ದಿನಾಂಕ: 9.8.2005ರ ಅಧಿಸೂಚನೆಯನ್ವಯ ಹೊರಡಿಸಲಾಗಿದ್ದ 1973ರ ಕ್ರಿಮಿನಲ್ ಪ್ರೊಸಿಜರ್ ಕೋಡ್‌ನ ಸೆಕ್ಷನ್ 144ರ ನಿಷೇದಾಜ್ಞೆಯನ್ನು ದಿನಾಂಕ: 10.8.2005ರ ರಾತ್ರಿ 8.00 ಗಂಟೆಯಿಂದ ಹಿಂತೆಗೆದುಕೊಂಡಿರುವುದಾಗಿ ಈ ಮೂಲಕ ಘೋಷಿಸಿರುತ್ತೇನೆ.

ಈ ಅಧಿಸೂಚನೆಯನ್ನು ದಿನಾಂಕ: 10.8.2005 ರಂದು ನನ್ನ ಸ್ವ ಹಸ್ತಾಕ್ಷರ ಹಾಗೂ ನ್ಯಾಯಾಲಯದ ಮುದ್ರೆಯ ಒಪ್ಪಿಗೆಯೊಂದಿಗೆ ಈ ಆದೇಶ ನೀಡಲಾಗಿದೆ.

ಪಿ.ಆರ್. 1199 ತಾಲ್ಲೂಕು ದಂಡಾಧಿಕಾರಿ, ಉಡುಪಿ ತಾಲ್ಲೂಕು, ಉಡುಪಿ.

## ಉಡುಪಿ ತಾಲ್ಲೂಕು ದಂಡಾಧಿಕಾರಿ, ಉಡುಪಿ ತಾಲ್ಲೂಕು, ಉಡುಪಿ ಇವರ ಅಧಿಸೂಚನೆ

**ಸಂಖ್ಯೆ: ಎಂಎಜಿ:ಸಿಆರ್:69:2005-06, ದಿನಾಂಕ: 9ನೇ ಆಗಸ್ಟ್ 2005**

ಉಡುಪಿ ತಾಲ್ಲೂಕು, ಕಾಪು ಹೋಬಳಿ ಎಲ್ಲೂರು ಗ್ರಾಮದಲ್ಲಿ ದಿನಾಂಕ: 10.08.2005 ರಿಂದ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯವರು ಭೂಸ್ವಾಧೀನ ಪಡಿಸಿಕೊಂಡ ಜಮೀನಿನ ಸರ್ವೆ ಹಾಗೂ ಸದ್ರಿ ಜಮೀನಿನಲ್ಲಿರುವ ಕಟ್ಟಡ ಹಾಗೂ ಮರಗಳ ಮೌಲ್ಯ ಮಾಪನವನ್ನು ಇಲಾಖಾಧಿಕಾರಿಗಳು

ನಡೆಸಲಿದ್ದು, ಆ ಸಂದರ್ಭದಲ್ಲಿ ಅಲ್ಲಿನ ಪರಿಸರದಲ್ಲಿರುವ ಕೆಲವೊಂದು ಸಾರ್ವಜನಿಕರಿಂದ, ಜನಜಾಗೃತಿ ಸಮಿತಿ ಮುಂತಾದ ಸಂಘಟನೆಯವರಿಂದ ಈ ಕಾರ್ಯಕ್ಕೆ ತಡೆಯೊಡ್ಡುವ ಸಾಧ್ಯತೆ ಇರುವುದೆಂದು, ಇದರಿಂದ ಸಾರ್ವಜನಿಕ ಶಾಂತಿಭಂಗವಾಗುವ ಸಾಧ್ಯತೆಯಿರುವುದಾಗಿ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಭೂಸ್ವಾಧೀನಾಧಿಕಾರಿಯವರು ಮತ್ತು ಉಡುಪಿ ಜಿಲ್ಲಾ ಪೊಲೀಸ್ ಅಧೀಕ್ಷಕರು ವರದಿ ಸಲ್ಲಿಸಿರುವುದಾಗಿ ಮಾನ್ಯ ಉಡುಪಿ ಜಿಲ್ಲಾ ದಂಡಾಧಿಕಾರಿಗಳಿಂದ ವರದಿ ಬಂದಿದ್ದು, ಈ ಹಿನ್ನೆಲೆಯಲ್ಲಿ ಆ ಸ್ಥಳದ ವಿದ್ಯಮಾನವನ್ನು ಸೂಕ್ಷ್ಮವಾಗಿ ಗಮನಿಸಿ, ಮುಂಜಾಗ್ರತಾ ಕ್ರಮವಾಗಿ ಕಾನೂನು, ಸಾರ್ವಜನಿಕ ಶಿಸ್ತು ಹಾಗೂ ಶಾಂತಿ ಪಾಲನೆಯ ಹಿತದೃಷ್ಟಿಯಿಂದ 1973ರ ಕ್ರಿಮಿನಲ್ ಪ್ರೊಸೀಜರ್ ಕೋಡ್‌ನ ಸೆಕ್ಷನ್ 144 ರಂತೆ ನಿಷೇದಾಜ್ಞೆಯನ್ನು ಜಾರಿಗೊಳಿಸುವುದು ಅಗತ್ಯವೆಂದು ಮನಗಂಡು, ಕೆ. ಮುರಳೀಧರ, ತಾಲ್ಲೂಕು ದಂಡಾಧಿಕಾರಿ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ ಆದ ನಾನು 1973ರ ಕ್ರಿಮಿನಲ್ ಪ್ರೊಸೀಜರ್ ಕೋಡ್‌ನ ಸೆಕ್ಷನ್ 144 ರಂತೆ ನಿಷೇಧಾಜ್ಞೆಯನ್ನು ಉಡುಪಿ ತಾಲ್ಲೂಕು ಕಾಪು ಹೋಬಳಿಯ - 1. ಹೆಜಮಾಡಿ, 2. ನಡ್ಸಾಲು 3. ಪಾದೆಬೆಟ್ಟು 4. ನಂದಿಕೂರು 5. ಫಲಿಮಾರು 6. ಸಾಂತೂರು 7. ಪಿಲಾರು 8. ಕುತ್ಯಾರು 9. 38 ಕಳತ್ತೂರು 10. ಪಾದೂರು 11. ಮಲ್ಲಾರು 12. ಬೆಳಪು 13. ಎಲ್ಲೂರು 14. ತೆಂಕ 15. ಬಡಾ 16. ಮೂಳೂರು 17. ಪಡು 18. ಉಳಿಯಾರಗೋಳಿ 19. ಮಟ್ಟು 20. ಕೋಟೆ 21. ಮೂಡಬೆಟ್ಟು 22. ಪಾಂಗಾಳ 23. ಇನ್ನಂಜೆ 24. ಮಜೂರು 25. 92-ಹೇರೂರು 26. ಶಿವ 28. ಕಟ್ಟಿಂಗೇರಿ 28. ಬೆಳ್ಳೆ 29. ಕುರ್ಕಾಲು 30. ಏಣಗುಡ್ಡೆ - ಗ್ರಾಮಗಳ ವ್ಯಾಪ್ತಿಗೆ, ಈ ಮೂಲಕ ಘೋಷಿಸಿರುತ್ತೇನೆ.

1. ಯಾವುದೇ ಸಾರ್ವಜನಿಕರು 5 ಜನರು ಯಾ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಸಾರ್ವಜನಿಕ ರಸ್ತೆ ಬೀಧಿ, ಓಣಿ, ಕೇರಿಗಳಲ್ಲಿ ಮತ್ತು ಸಾರ್ವಜನಿಕ ಸ್ಥಳ ಮತ್ತು ಸರ್ಕಾರಿ ಕಟ್ಟಡ ಮತ್ತು ಸರ್ಕಾರಿ ಕಛೇರಿಯ 100 ಗಜಗಳ ಅಂತರದಲ್ಲಿ ಗುಂಪು ಸೇರುವುದು ಮತ್ತು ತಿರುಗುವುದನ್ನು ನಿಷೇಧಿಸಿದೆ.
2. ಯಾವುದೇ ಆಯುಧ, ಕುಡುಗೋಲು, ಖಡ್ಗ, ಭರ್ಜಿ, ಗಧೆ, ಕೋಲು, ಚೂರಿ, ದೊಣ್ಣೆ, ಲಾಠಿ ಅಥವಾ ದೈಹಿಕ ಹಿಂಸೆಗೆ ಕಾರಣವಾಗುವ ಅಥವಾ ಮಾರಕವಾಗುವ ಇನ್ನಾವುದೇ ವಸ್ತುಗಳನ್ನು ಧರಿಸುವುದನ್ನು ನಿಷೇಧಿಸಿದೆ.
3. ಯಾವುದೇ ಕ್ಷಾರಕ ಯಾ ಸ್ಫೋಟಕ ವಸ್ತುಗಳನ್ನು ಹೊಂದುವುದನ್ನು ನಿಷೇಧಿಸಿದೆ.
4. ಯಾವುದೇ ಕಲ್ಲುಗಳನ್ನು ಒಟ್ಟುಗೂಡಿಸುವುದು, ತಯಾರಿಸುವುದು ಯಾ ಕ್ಷಿಪಣಿಗಳು ಅಥವಾ ಇತರ ಕ್ಷಿಪಣಿಯಾಗಿ ಉಪಯೋಗಿಸಲ್ಪಡುವ ಅವಕಾಶವಿರುವ ಇತರ ಆಯುಧಗಳು ಸಾಧನ ಸಾಮಾಗ್ರಿಗಳನ್ನು ಧರಿಸುವುದನ್ನು ನಿಷೇಧಿಸಿದೆ.
5. ಮನುಷ್ಯರ ಆಕೃತಿ, ಶರೀರ, ಪ್ರತಿಮೆ, ಬೊಂಬೆ ಪ್ರದರ್ಶನ ನಿಷೇಧಿಸಿದೆ.
6. ಸಾರ್ವಜನಿಕವಾಗಿ ಯಾವುದೇ ಕೂಗನ್ನು ಉಚ್ಚರಿಸುವುದು, ಪದ ಹಾಡುವುದು ಗಾಯನ ಮಾಡುವುದು, ಆವೇಶ ಭಾಷಣ ಮಾಡುವುದು, ಸಂಜ್ಞೆಗಳನ್ನು ಉಪಯೋಗಿಸುವುದು, ಚೇಷ್ಠೆ ಮಾಡುವುದು ಮತ್ತು ಚಿತ್ರಗಳ ಪ್ರದರ್ಶನ ತಯಾರಿಸುವುದು, ಯಾ ಪ್ರಸಾರ ಮಾಡುವುದು, ಗುರುತುಗಳು ಪ್ರಕಟಣಾ ಪತ್ರಿಕೆಗಳ ಯಾ ಇತರ ಯಾವುದೇ ವಸ್ತುಗಳ ಪ್ರದರ್ಶನದಿಂದ ಸಭ್ಯತನ, ಸದಾಚಾರ, ಸಾರ್ವಜನಿಕ ಹಿತ ಯಾ ಭದ್ರತೆ ಶಿಥಿಲಗೊಳ್ಳುವಂತಹ ಯಾ ಸರಕಾರವನ್ನು ಕೆದಕುವ ಯಾ ಅಪರಾಧ ವೆಸಗುವ, ಪ್ರೇರೇಪಿಸುವ ಕ್ರಮವನ್ನು ನಿಷೇಧಿಸಿದೆ.

ಈ ಆದೇಶವು ದಿನಾಂಕ: 10.08.2005ರ ಪೂರ್ವಾಹ್ನ 6.00 ಗಂಟೆಯಿಂದ ದಿನಾಂಕ: 16.08.2005ರ ಸಂಜೆ 6.00 ಗಂಟೆಯವರೆಗೆ ಜಾರಿಯಲ್ಲಿರುತ್ತದೆ.

ಈ ಆದೇಶವು ಸರ್ಕಾರದಿಂದ ಯಾ ಸರ್ಕಾರದ ಆದೇಶದಂತೆ ನಡೆಸಲ್ಪಡುವ ಯಾವುದೇ ಕಾರ್ಯಕ್ರಮ ಸಭೆ, ಸಮಾರಂಭಗಳಿಗೆ ಅನ್ವಯಿಸುವುದಿಲ್ಲ ಮತ್ತು ಸರ್ಕಾರಿ ನೌಕರರು ಕರ್ತವ್ಯ ನಿರ್ವಹಣೆಯ ವೇಳೆ ಲಾಠಿಗಳನ್ನು ಉಪಯೋಗಿಸುವುದಕ್ಕೆ ಅನ್ವಯಿಸುವುದಿಲ್ಲ.

ಈ ಆದೇಶವು ಕೆಳಗೆ ಸಹಿ ಮಾಡಿದವರ ಪೂರ್ವಾನುಮತಿಯನ್ನು ಪಡೆದು ನಡೆಯುವ ಶವ ಮೆರವಣಿಗೆ, ಮದುವೆ ಮೆರವಣಿಗೆ ಮತ್ತು ಧಾರ್ಮಿಕ ಸಮಾರಂಭ ಮತ್ತು ಶಾಲಾ ಕಾಲೇಜುಗಳಲ್ಲಿ ನಡೆಯುವ ಸಭೆ ಸಮಾರಂಭಗಳಿಗೆ ಅನ್ವಯಿಸುವುದಿಲ್ಲ.

ದಿನಾಂಕ: 09.08.2005 ರಂದು ನನ್ನ ಸ್ವ ಹಸ್ತಾಕ್ಷರ ಹಾಗೂ ನ್ಯಾಯಾಲಯದ ಮುದ್ರೆಯ ಒಪ್ಪಿಗೆಯೊಂದಿಗೆ ಈ ಆದೇಶ ನೀಡಲಾಗಿದೆ.

-

ಪಿ.ಆರ್. 1200 ತಾಲ್ಲೂಕು ದಂಡಾಧಿಕಾರಿ, ಉಡುಪಿ ತಾಲ್ಲೂಕು, ಉಡುಪಿ.

## ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೊರಟಗೆರೆ

**ಜಿ.ಟಿ.ನಂ. /05, ದಿನಾಂಕ: 16ನೇ ಆಗಸ್ಟ್ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ದಿನಾಂಕ: 24.11.2005 ರಂದು ಬೆಳಿಗ್ಗೆ 11.00 ಗಂಟೆಗೆ ಕೊರಟಗೆರೆ ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಈ ಕೆಳಗೆ ನಮೂದು ಮಾಡಿರುವ ಮುದ್ದೆಮಾಲುಗಳನ್ನು ಬಹಿರಂಗ ಹರಾಜು ಮಾಡಲಾಗುವುದು. ಇಚ್ಚೆವುಳ್ಳ ವ್ಯಕ್ತಿಗಳು ಈ ಹರಾಜಿನಲ್ಲಿ ಭಾಗವಹಿಸಿ ಬಿಡ್ ಮಾಡಬಹುದು. ಯಾರ ಹೆಸರಿಗೆ ಬಿಡ್ ನಿಲ್ಲುವುದೋ ಅವರು ಸ್ಥಳದಲ್ಲಿಯೇ ಹಣವನ್ನು ಪಾವತಿ ಮಾಡಿ ಸಂಬಂಧಪಟ್ಟವರು ತೆಗೆದುಕೊಂಡು ಹೋಗತಕ್ಕದ್ದು. ಬಿಡ್ಡನ್ನು ಪುರಸ್ಕರಿಸುವುದು ಅಥವಾ ತಿರಸ್ಕರಿಸುವುದು ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ ರವರಿಗೆ ಸೇರಿದ್ದು.

| ಕ್ರ.ಸಂ. | ಕೇಸ್ ನಂಬರ್ | ಸಿ.ಆರ್.ನಂ. | ಹರಾಜು ಮತ್ತು ಸ್ವತ್ತುಗಳು |
|---|---|---|---|
| 1 | ಸಿ.ಸಿ.ನಂ.9-04 | 44-04 | ಬಜಾಜ್ ಸ್ಕೂಟರ್ ನಂ. ಸಿಟಿಪಿ-1169<br>ಇಂಜಿನ್ ನಂ. 06 ಈ-2210, ಚಾಸ್ಸಿ ನಂ. 259438 |
| 2 | ಸಿ.ಸಿ.ನಂ.3-04 | 60-04 | ಒಂದು 5 ಹೆಚ್.ಪಿ. ಹಾಗೂ 3 ಹೆಚ್.ಪಿ. ಮೋಟರ್ ಮತ್ತು ಎರಡು ಬಿಡ್ಡಿಂಗ್ ಅಂಗರ್‌ಗಳು. |

ಪಿ.ಆರ್. 1203 ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ., ಕೊರಟಗೆರೆ.

## DEPARTMENT OF PERSONNEL AND ADMINISTRATIVE REFORMS

## NOTIFICATION

### No. DPAR 87 SFP 2005, Bangalore, Dated: 12th August 2005

On completion of professional phase training at Indira Gandhi National Forests Academy, Dehradun, Sri Ravishankar, IFS (Probationer) of 2003-06 batch allotted to Karnataka cadre of IFS is posted to shimoga Circle, Shimoga with Division allotment to Shimoga Division for under on going "On the Job Training".

The details of the "On the job training" are given in the Annexure appended to this notification. The concerned Conservator of Forests shall decide the place of posting of the probationer during the Range Training. The Forest Division shall be the Headquarters during the entire period of his "On the Job Training"

By Order and in the name of Governor of Karnataka,

**EKROOP CAUR**

Deputy Secretary to Government,

Department of Personnel and Administrative Reforms (Services).

**ANNEXURE**

| Sl.No. | Component Training | Duration |
|---|---|---|
| 1. | Training in Territorial Forest Division | 7 Weeks (District Training including attachment to Territorial Division-4 weeks, 1/2 week DC, 1/2 week SP, 2 weeks CEO of Zilla Panchayats. |
| 2. | Institutional Training | 6 weeks |
| 3. | State Headquarters attachment and tour | 2 weeks |
| 4. | Circle attachment | 1 week |
| 5. | Attachment with District Collector | |
| 6. | Attachment with Superintendent of Police | As in (1) |
| 7. | Attachment with CJM | |
| 8. | Range Training | 20 weeks |
| 9. | Attachment with special wing/depots of local important | Nil |
| | **Total** | **36 weeks** |

**EKROOP CAUR**

P.R. 1201

Deputy Secretary to Government,

Department of Personnel and Administrative Reforms (Services).

## ಜಿಲ್ಲಾಧಿಕಾರಿಯವರ ಕಛೇರಿ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಂತಿಮ ಅಧಿಸೂಚನೆ

### ಸಂಖ್ಯೆ: ಕೆ.ಎಸ್.ಎ.:ಸಿಆರ್:23/2004-05, ದಿನಾಂಕ: 3ನೇ ಆಗಸ್ಟ್ 2005

ನಂ. ಕೆ.ಎಸ್.ಎ.:ಸಿಆರ್-23/2004-05, ದಿನಾಂಕ: 6.4.2005ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್ ನಲ್ಲಿರುವ ಬೆಂಗಳೂರು ನಗರ ಶಿವನಗರ ಕಾಲೋನಿ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಆಕ್ಷೇಪಣೆಗಳು ಯಾವುದೂ ಬಂದಿರುವುದಿಲ್ಲ. ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಇದನ್ನು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿ ಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್ ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ, ಕೆಂಗೇರಿ ಉಪನಗರ, ಪರಿಮಿತಿಯಲ್ಲಿರುವ ಸ.ನಂ.191/2, ಶಿವನಗರ ಕಾಲೋನಿ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ.ಅ.) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಶಿವನಗರ ಕಾಲೋನಿ ಕೊಳಚೆ ಪ್ರದೇಶ | ಆರ್.ಟಿ.ಸಿ. ಯಂತೆ ಕೆ.ಎಸ್. ಹೊನ್ನಗಂಗಪ್ಪ ಬಿನ್ ಶಿವಗಂಗಪ್ಪ ಮತ್ತು (ಸಿ.ಐ.ಟಿ.ಬಿ.ಎ.ಗೆ 1.27 ಎಕರೆ:ಗುಂಟೆ ಬಿ.ಡಿ.ಎ) | 191/2 | 0.21 ಗುಂಟೆ | ಮುಖ್ಯ ರಸ್ತೆ | ಬಡಾವಣೆ | ಖಾಸಗಿ ಕಟ್ಟಡ | ಬಡಾವಣೆ |

ಎಂ.ಎ. ಸಾಧಿಕ್

ಪಿ.ಆರ್. 1204 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಬಿ1:71ಎ:ಎಂಡಿಜಿ-69/2002-03, ದಿನಾಂಕ: 19ನೇ ಆಗಸ್ಟ್ 2005**

**ವಿಷಯ:** ಮಂಡಗದ್ದೆ ವಲಯದಲ್ಲಿ ದಾಖಲಾದ ಅರಣ್ಯ ಮೊಕದ್ದಮೆ ಸಂಖ್ಯೆ: 69/2002-03.

**ಪ್ರಕರಣಗಳ ಸಾರಾಂಶ:**

ದಿನಾಂಕ: 21.9.2002 ರಂದು ಮಂಡಗದ್ದೆ ವಲಯದ ವನಪಾಲಕರು ತಮ್ಮ ಸಿಬ್ಬಂದಿಯೊಡನೆ ಬೆಳಿಗ್ಗೆ ತೀರ್ಥಹಳ್ಳಿ, ಶಿವಮೊಗ್ಗ ರಸ್ತೆಯ ಮುಡುಬಾ ಅರಣ್ಯ ತನಿಖಾ ಠಾಣೆಯ ಮೂಲಕ ಹಾದು ಹೋಗುತ್ತಿದ್ದ ವಾಹನಗಳನ್ನು ತಪಾಸಣೆ ಮಾಡುತ್ತಿದ್ದಾಗ ಒಂದು ಜೀಪು ಬರುತ್ತಿದ್ದುದನ್ನು ಕಂಡು ಸದರಿ ಜೀಪನ್ನು ನಿಲ್ಲಿಸುವಂತೆ ಸೂಚನೆ ನೀಡಿದರೂ, ಸಹ ವಾಹನವು ನಿಲ್ಲದೆ ಶಿವಮೊಗ್ಗದ ಕಡೆಗೆ ವೇಗವಾಗಿ ಚಲಿಸಿದಾಗ ವನಪಾಲಕ ಹಾಗೂ ಸಿಬ್ಬಂದಿ ವರ್ಗದವರು ತಮ್ಮೊಂದಿಗಿದ್ದ ಇಲಾಖಾ ಜೀಪಿನೊಂದಿಗೆ ಈ ವಾಹನವನ್ನು ಬೆನ್ನಟ್ಟಿದರು. ಈ ವಾಹನವನ್ನು ತಡೆಹಿಡಿಯುವಂತೆ ಗಾಜನೂರು ಅರಣ್ಯ ತನಿಖಾ ಠಾಣೆ ಸಿಬ್ಬಂದಿಯವರಿಗೆ ನಿಸ್ತಂತು ಮೂಲಕ ತಿಳಿಸಿದರು. ವನಪಾಲಕ ಮತ್ತು ಸಿಬ್ಬಂದಿ ಈ ಜೀಪನ್ನು ಬೆನ್ನಟ್ಟಿದಾಗ ಸದರೀ ಜೀಪು ಗಾಜನೂರು ಅರಣ್ಯ ತನಿಖಾ ಠಾಣೆ ಬಳಿ ನಿಂತು ಜೀಪಿನಲ್ಲಿದ್ದ 3 ಜನ ಕೆಳಕ್ಕೆ ಜಿಗಿದು ಓಡಲು ಪ್ರಾರಂಭಿಸಿದರು. ಆಗ ಮಂಡಗದ್ದೆ ಅರಣ್ಯ ವಲಯದ ಸಿಬ್ಬಂದಿ ಇವರನ್ನು ಬೆನ್ನಟ್ಟಿ ಸೆರೆ ಹಿಡಿದರು. ಸೆರೆಸಿಕ್ಕ ಈ 3 ಜನ ಆಸಾಮಿಗಳನ್ನು ನಿಲ್ಲಿಸಿದ್ದ ಸದರೀ ಜೀಪಿನ ಬಳಿ ಕರೆತಂದು ಪರಿಶೀಲಿಸಿದಾಗ ಈ ಜೀಪಿನ ನೋಂದಣಿ ಸಂಖ್ಯೆ: ಕೆಎ-14-3293 ಆಗಿರುವುದು ಕಂಡು ಬಂದಿತು. ಜೀಪಿನ ಒಳಗಡೆ ಪರಿಶೀಲಿಸಲಾಗಿ ಇದರ ಮೇಲ್ಭಾಗದಲ್ಲಿ ಬಾಕ್ಸ್ ಮಾಡಲಾಗಿದ್ದು, ಈ ಬಾಕ್ಸಿನೊಳಗೆ 30 ಶ್ರೀಗಂಧದ ತುಂಡುಗಳನ್ನು ತುಂಬಿರುವುದು ಕಂಡು ಬಂದಿತು. ಈ ಶ್ರೀಗಂಧದ ತುಂಡುಗಳ ಮೇಲೆ ಯಾವುದೇ ಸರ್ಕಾರಿ ಛಾಪಾ ಇರಲಿಲ್ಲ. ಈ ಶ್ರೀಗಂಧದ ಸಾಗಾಣಿಕೆ ಬಗ್ಗೆ ಸೆರೆಸಿಕ್ಕ 3 ಆಸಾಮಿಗಳ ಬಳಿ ಯಾವುದೇ ರಹದಾರಿ ಇರಲಿಲ್ಲ. ಈ ಆಸಾಮಿಗಳ ಹೆಸರು ಮತ್ತು ವಿಳಾಸವನ್ನು ವಿಚಾರಿಸಲಾಗಿ ಮಾಹಿತಿಗಳನ್ನು ಈ ಕೆಳಕಂಡಂತೆ ನೀಡಿದರು.

**1ನೇ ಆಸಾಮಿ:**

ಕೆ.ಎಂ. ಕೃಷ್ಣ ಬಿನ್ ಮಹೇಶ್ವರಪ್ಪ, ಸಿಟಿ ಬಸ್ ಕಂಡಕ್ಟರ್, 7ನೇ ತಿರುವು ವಿದ್ಯಾನಗರ, ಶಿವಮೊಗ್ಗ.

**2ನೇ ಆಸಾಮಿ:**

ಸಿ. ನಾಗರಾಜ ಬಿನ್ ಚಂದ್ರಪ್ಪ, ಪೈಂಟರ್, ಮಲ್ಲಿಕಾರ್ಜುನ ಟ್ರಾನ್ಸ್‌ಪೋರ್ಟ್ ಹಿಂಭಾಗ, ಹರಿಗೆ ಗ್ರಾಮ, ವಿದ್ಯಾನಗರ, ಶಿವಮೊಗ್ಗ.

**3ನೇ ಆಸಾಮಿ:**

ಸತ್ಯನಾರಾಯಣ ಬಿನ್ ಕೂಸು ಪೂಜಾರಿ ಕೊಟ್ಟಲಮನೆ ಗ್ರಾಮ, ಶೇಡ್ಗಾರು ತೀರ್ಥಹಳ್ಳಿ ತಾಲ್ಲೂಕು.

ಈ ಆಸಾಮಿಗಳನ್ನು ವಿಚಾರಣೆಗೆ ಒಳಪಡಿಸಿದಾಗ ತಾವು ಈ ಶ್ರೀಗಂಧವನ್ನು ಜೀಪ್ ನಂ. ಕೆಎ-14-ಎಂ-3293 ರಲ್ಲಿ ಅಕ್ರಮ ಸಾಗಾಣಿಕೆ ಮಾಡುತ್ತಿದ್ದುದು ನಿಜವೆಂದು ಒಪ್ಪಿಕೊಂಡರು, ಈ 30 ಶ್ರೀಗಂಧದ ತುಂಡುಗಳನ್ನು ತೂಕ ಮಾಡಲಾಗಿ ಇವುಗಳ ತೂಕ 82 ಕೆ.ಜಿ. ಇರುವುದು ಕಂಡು ಬಂದಿತು. ಮಂಡಗದ್ದೆ ವಲಯದ ವನಪಾಲಕರು ಈ ಶ್ರೀಗಂಧದ ತುಂಡುಗಳ ಮೇಲೆ ಅಮಾನತ್ತು ಗುರುತು ಮಾಡಿ ಮಹಜರು ಕ್ರಮದ ಮೂಲಕ ಅರಣ್ಯ ಮೊಕದ್ದಮೆ ದಾಖಲಿಸಿ ಈ 30 ಶ್ರೀಗಂಧದ ತುಂಡುಗಳು ಮತ್ತು ಜೀಪ್ ನಂ. ಕೆಎ-14-ಎಂ-3293 ನ್ನು ಸರ್ಕಾರಕ್ಕೆ ಅಮಾನತ್ತು ಪಡಿಸಿದರು. ಸೆರೆ ಸಿಕ್ಕ ಆಸಾಮಿಗಳನ್ನು ನ್ಯಾಯಾಂಗ ಕಸ್ಟಡಿಗೆ ಒಪ್ಪಿಸಲಾಗಿದ್ದು, ಅಮಾನತ್ತು ಪಡಿಸಿರುವ ಸೊತ್ತುಗಳನ್ನು ವಲಯ ಅರಣ್ಯಾಧಿಕಾರಿ, ಮಂಡಗದ್ದೆಯವರು ಈ ಪ್ರಾಧಿಕಾರಕ್ಕೆ ಹಾಜರು ಪಡಿಸಿದರು.

ಈ ಜೀಪ್ ನಂ. ಕೆಎ-14-ಎಂ-3293ನ್ನು ಕರ್ನಾಟಕ ಅರಣ್ಯ ಕಾಯ್ದೆ ಪ್ರಕಾರ ಸರ್ಕಾರಕ್ಕೆ ಯಾಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಕಾರಣ ಕೇಳಿ ಈ ಪ್ರಕರಣದ 3 ಜನ ಆರೋಪಿಗಳಿಗೆ ದಿನಾಂಕ: 14.7.2005 ರಂದು ಶೋಕಾಸ್ ನೋಟೀಸ್ ನೀಡಲಾಯಿತು. ಒಂದನೇ ಆರೋಪಿಗೆ ನೀಡಿದ ನೋಟೀಸ್ ಜಾರಿಯಾಗದೆ ವಾಪಸ್ ಬಂದಿರುತ್ತದೆ. 2 ಮತ್ತು 3ನೇ ಆರೋಪಿಗಳಿಗೆ ನೀಡಿದ ಶೋಕಾಸ್ ನೋಟೀಸ್‌ಗಳನ್ನು ಈ ಆರೋಪಿಗಳು ಸ್ವೀಕರಿಸಿದ್ದು ನೋಟೀಸಿಗೆ ಈ ವರೆವಿಗೂ ಉತ್ತರ ನೀಡಿರುವುದಿಲ್ಲ. ಈ ಜೀಪಿನ ಮಾಲೀಕರು ಮತ್ತು ವಿಳಾಸವನ್ನು ಪತ್ತೆ ಹೆಚ್ಚುವ ಸಲುವಾಗಿ 'ಬಿ' ರಿಜಿಸ್ಟರ್ ವಹಿಯ ಪ್ರತಿಯನ್ನು ಶಿವಮೊಗ್ಗದ ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಂದ ಪಡೆಯಲಾಯಿತು. ಈ ದಾಖಲಾತಿಯ ಪ್ರಕಾರ ಕೆಎ-14-ಎಂ-3293 ನೋಂದಣಿಯ ವಾಹನವು ಮಾರುತಿ ಓಮಿನಿ ವ್ಯಾನ್ ಆಗಿರುತ್ತದೆ. ಆರೋಪಿಗಳು ನಕಲಿ ನಂಬರ್ ಪ್ಲೇಟನ್ನು ಈ ಜೀಪಿಗೆ ಅಳವಡಿಸಿ ಶ್ರೀಗಂಧ ಸಾಗಾಣಿಕೆಗೆ ಪ್ರಯತ್ನಿಸಿರುವುದು ಖಚಿತಪಟ್ಟಿರುತ್ತದೆ.

ಮೇಲ್ಕಂಡ ಜೀಪು ದಿನಾಂಕ: 21.9.2002 ರಂದು ಶ್ರೀಗಂಧದ ಅಕ್ರಮ ಸಾಗಾಣಿಕೆಗೆ ಒಳಗೊಂಡಿರುವುದು ವಾಹನದ ಮಾಲೀಕರ ತಿಳುವಳಿಕೆ ಮತ್ತು ಪರಿಜ್ಞಾನದಿಂದ ಕೂಡಿರಲಿಲ್ಲ ಎಂಬುದನ್ನು ಸಾಬೀತು ಪಡಿಸಲು ಈ ಜೀಪಿನ ಮಾಲೀಕರಾಗಲೀ ಅವರ ಪ್ರತಿನಿಧಿಗಳಾಗಲೀ, ಈ ಪ್ರಾಧಿಕಾರಕ್ಕೆ ಈವರೆವಿಗೂ ಹಾಜರಾಗಿರುವುದಿಲ್ಲ. ಈ ಜೀಪು ಮತ್ತು ಶ್ರೀಗಂಧದ ಮೇಲೆ ತಮಗಿರುವ ಹಕ್ಕನ್ನು ನಿರೂಪಿಸಲು ಈವರೆವಿಗೂ ಯಾರೂ ಈ ಪ್ರಾಧಿಕಾರವನ್ನು ಸಂಪರ್ಕಿಸಿರುವುದಿಲ್ಲ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಮಾಡಿರುತ್ತೇನೆ.

**ಆದೇಶ**

ಮಂಡಗದ್ದೆ ವಲಯದಲ್ಲಿ ದಿನಾಂಕ: 21.9.2002 ರಂದು ದಾಖಲಾದ ಅರಣ್ಯ ಮೊಕದ್ದಮೆ ಸಂಖ್ಯೆ: 69/2002-03 ರಲ್ಲಿ ಸರ್ಕಾರಕ್ಕೆ ಅಮಾನತ್ತುಗೊಳಿಸಲಾದ 82 ಕೆ.ಜಿ. ತೂಕದ 30 ಶ್ರೀಗಂಧದ ತುಂಡುಗಳನ್ನು ಮತ್ತು ಜೀಪ್ ನಂ.ಕೆಎ-14-ಎಂ-3293 ನ್ನು, ಕರ್ನಾಟಕ ಅರಣ್ಯ ಕಾಯ್ದೆ

ಸೆಕ್ಷನ್ 71ಎ ಯಿಂದ 71ಜಿ ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಮೇಲ್ಮನವಿ ಅವಧಿ ಮುಗಿದ ನಂತರ ಈ ಸೊತ್ತುಗಳನ್ನು ಕಾನೂನು ರೀತಿಯಲ್ಲಿ ವಿಲೇವಾರಿಗೊಳಿಸಲು ಸಹ ಆದೇಶಿಸಿದೆ. ಈ ಆದೇಶವನ್ನು ಕಛೇರಿ ಮೊಹರಿನೊಂದಿಗೆ ದಿನಾಂಕ: 19.8.2005 ರಂದು ಹೊರಡಿಸಿರುತ್ತೇನೆ.

**ಜಿ. ಜಯರಾಮಯ್ಯ**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಪಿ.ಆರ್. 1205

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ
## ಸಾರ್ವಜನಿಕ ನೋಟೀಸ್

**ಸಂಖ್ಯೆ: ಡಬ್ಲ್ಯೂಸಿಎ 38:2005-06 ದಿನಾಂಕ: 17ನೇ ಆಗಸ್ಟ್ 2005**

**ಅರ್ಜಿದಾರರು :**

1) ಶ್ರೀ ನಾರಾಯಣ ನಾಯ್ಕ ಬಿನ್ ಲಾಲುನಾಯ್ಕ
2) ಶ್ರೀಮತಿ ಬಕನಿಬಾಯಿ ಕೋಂ ನಾರಾಯಣನಾಯ್ಕ
3) ಶ್ರೀ ಮುರಳಿ ಕೃಷ್ಣ ಬಿನ್ ಎ. ನಾರಾಯಣನಾಯಕ್
ಕೆಳಗಡೆ ನಾಯಕರ ಬೀದಿ, ಚಾಮರಾಜನಗರ ಟೌನ್.

**ಪ್ರತಿವಾದಿಗಳು:**

1) ಶ್ರೀಮತಿ ಸುವರ್ಣ ಕೋಂ ಶಂಕರಯ್ಯ,
ಮನೆ ನಂ.2341, 3ನೇ ಕ್ರಾಸ್, ಗಾಂಧಿನಗರ, ಮಂಡ್ಯ.
2) ಬ್ರಾಂಚ್ ಮ್ಯಾನೇಜರ್,
ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ತೇಜಸ್
ಕಾಂಪ್ಲೆಕ್ಸ್, ನ್ಯೂ ಸ್ಯೆಯ್ಯಾಜಿ ರಾವ್ ರಸ್ತೆ, ಮೈಸೂರು.

ಮೃತ ಗೋಪಿ ಇವರ ತಂದೆ ತಾಯಿಯಾದ ಟಿ. ನಾರಾಯಣ ನಾಯ್ಕ ಮತ್ತು ಬಕನಿಬಾಯಿ ಮತ್ತು ಸಹೋದರನಾದ ಮುರಳಿಕೃಷ್ಣ, ಕೆಳಗಡೆ ನಾಯಕರ ಬೀದಿ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ, ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 16.08.2005 ರಂದು ಅರ್ಜಿ ಸಲ್ಲಿಸಿ, ಪ್ರತಿವಾದಿಯ ಸಂಸ್ಥೆಯಲ್ಲಿ ಗೋಪಿ ಇವರು ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಅಪಘಾತ ಹೊಂದಿ ದಿನಾಂಕ: 30.2.2005 ರಂದು ಮರಣ ಹೊಂದಿರುತ್ತಾರೆಂದು ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

ಪಿ.ಆರ್. 1206

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ
## ಸಾರ್ವಜನಿಕ ನೋಟೀಸ್

**ಸಂಖ್ಯೆ: ಡಬ್ಲ್ಯೂಸಿಎ 30:2005-06 ದಿನಾಂಕ: 17ನೇ ಆಗಸ್ಟ್ 2005**

**ಅರ್ಜಿದಾರರು :**

1) ಜಯಮ್ಮ ಕೋಂ ಲೇಟ್ ಮಹದೇವಸ್ವಾಮಿ
2) ಮರಿಮಾದಮ್ಮ ಕೋಂ ಕಬ್ಬಳ್ಳಿ ಮಾದಯ್ಯ
3) ವಾಸ: ಕಮರವಾಡಿ ಗ್ರಾಮ, ಸಂತೆಮರಳ್ಳಿ ಗ್ರಾಮ,
ಸಂತೆಮರಳ್ಳಿ ಹೋಬಳಿ, ಚಾ:ನಗರ ಮತ್ತು ಜಿಲ್ಲೆ.

**ಪ್ರತಿವಾದಿಗಳು:**

1) ಚಿಟ್ಟಿಬಾಬು, ಗುತ್ತಿಗೆದಾರರು, ಮೆ: ಬೀಮಾನೇನಿ ಬಿಲ್ಡರ್ಸ್ ಪ್ರೈ ಲಿ.,
ನಂ. 25:1, ಶ್ರೀಕಂಠಮಹಲ್, 1ನೇ ಕ್ರಾಸ್, ಸಂಪಿಗೆ ರಸ್ತೆ,
ಮಲ್ಲೇಶ್ವರಂ, ಬೆಂಗಳೂರು.
2) ಯುನೈಟೆಡ್ ಇಂಡಿಯ ಇನ್ಶೂರೆನ್ಸ್ ಕಂ. ಲಿ.,
ಡಿ.ಓ. 071602, ನಂ.89/1, 2ನೇ ಹಂತ, 11ನೇ ಕ್ರಾಸ್,
ಮಲ್ಲೇಶ್ವರಂ, ಬೆಂಗಳೂರು-03.

ಮೃತ ಮಹದೇವಸ್ವಾಮಿ ಇವರ ಹೆಂಡತಿಯಾದ ಜಯಮ್ಮ ಹಾಗೂ ತಾಯಿಯಾದ ಮರಿಮಾದಮ್ಮ ಕಮರವಾಡಿ ಗ್ರಾಮ, ಸಂತೆಮರಳ್ಳಿ ಹೋಬಳಿ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ, ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 18.07.2005 ರಂದು ಅರ್ಜಿ ಸಲ್ಲಿಸಿ, ಪ್ರತಿವಾದಿಯ ಸಂಸ್ಥೆಯಲ್ಲಿ ಮಹದೇವಸ್ವಾಮಿ ಇವರು ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಅಪಘಾತ ಹೊಂದಿ ದಿನಾಂಕ: 4.2.2005 ರಂದು ಮರಣ ಹೊಂದಿರುತ್ತಾರೆಂದು ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

ಪಿ.ಆರ್. 1207

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ**

**ಸಾರ್ವಜನಿಕ ನೋಟೀಸ್**

**ಸಂಖ್ಯೆ: ಡಬ್ಲ್ಯೂಸಿಎ 28:2005-06 ದಿನಾಂಕ: 17ನೇ ಆಗಸ್ಟ್ 2005**

**ಅರ್ಜಿದಾರರು :**

1) ಶ್ರೀಮತಿ ಶಿವಮ್ಮ ಕೋಂ
ಲೇಟ್ ಪುಟ್ಟಮಲ್ಲಯ್ಯ, ನಾಗವಳ್ಳಿ,
ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ.

**ಪ್ರತಿವಾದಿಗಳು:**

1) ಶ್ರೀ ಕೆ.ಎಸ್. ರಾಮಸ್ವಾಮಿ ಬಿನ್ ಚಿನ್ನಸುಬ್ರಹ್ಮಣ್ಯ,
ನಂ:320, ಕೆಂಜಿನೂರು, ಎ. ನೆಗಮಾಮ, ಸತ್ಯಮಂಗಲ,
ಈರೋಡ್ ಜಿಲ್ಲೆ, ತಮಿಳುನಾಡು.
2) ವಿಭಾಗೀಯ ವ್ಯವಸ್ಥಾಪಕರು, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.,
ಚಾಮುಂಡಿಪುರಂ, ಮೈಸೂರು.

ಮೃತ ರಾಜ ಅಲಿಯಾಸ್ ಶಿವಣ್ಣ ಇವರ ತಾಯಿಯಾದ ಶಿವಮ್ಮ ನಾಗವಳ್ಳಿ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ, ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 16.8.2005 ರಂದು ಅರ್ಜಿ ಸಲ್ಲಿಸಿ, ಪ್ರತಿವಾದಿಯ ಸಂಸ್ಥೆಯಲ್ಲಿ ರಾಜ ಅಲಿಯಾಸ್ ಶಿವಣ್ಣ ಇವರು ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಅಪಘಾತ ಹೊಂದಿ ದಿನಾಂಕ: 25.3.2005 ರಂದು ಮರಣ ಹೊಂದಿರುತ್ತಾರೆಂದು ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**
ಪಿ.ಆರ್. 1208 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ**

**ಸಾರ್ವಜನಿಕ ನೋಟೀಸ್**

**ಸಂಖ್ಯೆ: ಡಬ್ಲ್ಯೂಸಿಎ 31:2005-06 ದಿನಾಂಕ: 17ನೇ ಆಗಸ್ಟ್ 2005**

**ಅರ್ಜಿದಾರರು :**

1) ಶ್ರೀಮತಿ ತಾಯಮ್ಮ ಕೋಂ ನಂಜಯ್ಯ
2) ನಂಜಯ್ಯ ಬಿನ್ ಲೇಟ್ ಗೂಗೆ ಮಲ್ಲಯ್ಯ
ಉತ್ತವಳ್ಳಿ ಗ್ರಾಮ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ.

**ಪ್ರತಿವಾದಿಗಳು:**

1) ಬಿ. ಮಹದೇವಸ್ವಾಮಿ ಬಿನ್ ಬಸವಯ್ಯ,
ತುಳಶಾಸನ ಗ್ರಾಮ, ಕಸಬಾ ಹೋಬಳಿ,
ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ.

ಮೃತ ಮಹದೇವಸ್ವಾಮಿ ಇವರ ತಂದೆ ತಾಯಿಯಾದ ತಾಯಮ್ಮ ಮತ್ತು ನಂಜಯ್ಯ ಉತ್ತುವಳ್ಳಿ ಗ್ರಾಮ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ, ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 29.7.2005 ರಂದು ಅರ್ಜಿ ಸಲ್ಲಿಸಿ, ಪ್ರತಿವಾದಿಯ ಸಂಸ್ಥೆಯಲ್ಲಿ ಮಹದೇವಸ್ವಾಮಿ ಇವರು ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಅಪಘಾತ ಹೊಂದಿ ದಿನಾಂಕ: 14.10.2004 ರಂದು ಮರಣ ಹೊಂದಿರುತ್ತಾರೆಂದು ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**
ಪಿ.ಆರ್. 1209 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ**

**ಸಾರ್ವಜನಿಕ ನೋಟೀಸ್**

**ಸಂಖ್ಯೆ: ಡಬ್ಲ್ಯೂಸಿಎ 24:2005-06 ದಿನಾಂಕ: 17ನೇ ಜೂನ್ 2005**

**ಅರ್ಜಿದಾರರು :**

1) ಶ್ರೀಮತಿ ಶಿವಮ್ಮ ಕೋಂ ಲೇಟ್ ಮಾದೇಶ್
2) ಮಾನಸ ಲೇಟ್ ಮಾದೇಶರವರ ಮಗಳು
3) ಮೋಹನಕುಮಾರ್ ಬಿನ್ ಲೇಟ್ ಮಾದೇಶ್
4) ವಿನೋದಕುಮಾರ್ ಬಿನ್ ಲೇಟ್ ಮಾದೇಶ್
ಮಣಗಳ್ಳಿ ಗ್ರಾಮ, ಕೊಳ್ಳೇಗಾಲ ತಾಲ್ಲೂಕು,
ಚಾಮರಾಜನಗರ ಜಿಲ್ಲೆ.

**ಪ್ರತಿವಾದಿಗಳು:**

1) ಸ್ಕಿಲ್ ಟೆಕ್ ಇಂಜಿನಿಯರ್ಸ್ ಅಂಡ್ ಕಂಟ್ರಾಕ್ಟರ್ಸ್ ಲಿ.,
ನಂ: 210, ಕೆ-30, 1ನೇ ಮಹಡಿ, ನಾರಾಯಣಶಾಸ್ತ್ರಿ ರಸ್ತೆ,,
ಚಾಮರಾಜ ಮೊಹಲ್ಲಾ, ಮೈಸೂರು.

ಮೃತ ಮಾದೇಶ್ ಇವರ ಹೆಂಡತಿಯಾದ ಶಿವಮ್ಮ 1ನೇ ಅರ್ಜಿದಾರರು, ಹಾಗೂ ಅವರ ಮಕ್ಕಳಾದ ಮಾನಸ, ಮೋಹನ್ ಕುಮಾರ್ ಮತ್ತು ವಿನೋದ್ ಕುಮಾರ್ 2 ರಿಂದ 4ನೇ ಅರ್ಜಿದಾರರು ಮಣಗಳ್ಳಿ ಗ್ರಾಮ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ, ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 30.5.2005 ರಂದು ಅರ್ಜಿ ಸಲ್ಲಿಸಿ, ಪ್ರತಿವಾದಿಯ ಸಂಸ್ಥೆಯಲ್ಲಿ ಮಾದೇಶ ಇವರು ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ

ಅಪಘಾತ ಹೊಂದಿ ದಿನಾಂಕ: 23.2.2005 ರಂದು ಮರಣ ಹೊಂದಿರುತ್ತಾರೆಂದು ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**

ಪಿ.ಆರ್. 1210 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ

## ಸಾರ್ವಜನಿಕ ನೋಟೀಸ್

**ಸಂಖ್ಯೆ: ಡಬ್ಲ್ಯೂಸಿಎ 39:2005-06 ದಿನಾಂಕ: 17ನೇ ಜೂನ್ 2005**

**ಅರ್ಜಿದಾರರು :**

1) ಸಿದ್ದಮ್ಮ ಕೋಂ ಮಹದೇವ ಶೆಟ್ಟಿ
2) ಮಹದೇವ ಶೆಟ್ಟಿ ಬಿನ್ ಪುಟ್ಟಶೆಟ್ಟಿ
3) ಅರಕಲವಾಡಿ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ.

**ಪ್ರತಿವಾದಿಗಳು:**

1) ಶಂಕರ್ ಶೆಟ್ಟಿ ಬಿನ್ ಮಾದಶೆಟ್ಟಿ
ಅರಕಲವಾಡಿ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ.
2) ದಿ ಬ್ರಾಂಚ್ ಮ್ಯಾನೇಜರ್,
ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ.,
ಸಯ್ಯಾಜಿರಾವ್ ರಸ್ತೆ, ಮೈಸೂರು.

ಮೃತ ಮಹೇಶ ಇವರ ತಂದೆ ತಾಯಿಯಾದ ಸಿದ್ದಮ್ಮ ಮತ್ತು ಮಹದೇವಶೆಟ್ಟಿ, ಅರಕಲವಾಡಿ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ, ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 16.8.2005 ರಂದು ಅರ್ಜಿ ಸಲ್ಲಿಸಿ, ಪ್ರತಿವಾದಿಯ ಸಂಸ್ಥೆಯಲ್ಲಿ ಮಹೇಶ ಇವರು ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಅಪಘಾತ ಹೊಂದಿ ದಿನಾಂಕ: 10.7.2005 ರಂದು ಮರಣ ಹೊಂದಿರುತ್ತಾರೆಂದು ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**

ಪಿ.ಆರ್. 1211 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

## ಮಾನ್ಯ 9ನೇ ಎ.ಸಿ.ಎಂ.ಎಂ. ನ್ಯಾಯಾಲಯದ ದಂಡಾಧಿಕಾರಿಯವರ ಸನ್ನಿಧಾನಕ್ಕೆ, ಬೆಂಗಳೂರು ನಗರ

**ವಿಷಯ :** ವಾರಸುದಾರರಿಲ್ಲದ ಮಾಲುಗಳನ್ನು ಸಾರ್ವಜನಿಕ ಹರಾಜು ಮಾಡಲು ಹಾಗೂ ಮಾಲುಗಳ ವಿವರಗಳನ್ನು ಪೊಲೀಸ್ ಗೆಜೆಟ್‌ನಲ್ಲಿ ಪ್ರಕಟಿಸಲು ಮಾನ್ಯ ನ್ಯಾಯಾಲಯದ ಆದೇಶ ಕೋರಿ.

**ನಿವೇದನೆ:**

ಈ ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಘನ ನ್ಯಾಯಾಲಯದ ಸನ್ನಿದಾನದಲ್ಲಿ ನಿವೇದಿಸಿಕೊಳ್ಳುವುದೇನೆಂದರೆ ಸಿಟಿಮಾರ್ಕೆಟ್ ಪೊಲೀಸ್ ಠಾಣೆಯಲ್ಲಿ ಈ ಕೆಳಕಂಡ ಮಾಲುಗಳ ವಾರಸುದಾರರು ಪತ್ತೆಯಾಗದೇ ಹಾಗೆಯೇ ಉಳಿದಿದ್ದು ಇವುಗಳ ವಾರಸುದಾರರ ಪತ್ತೆಯ ಬಗ್ಗೆ ಎಲ್ಲಾ ರೀತಿಯ ಕ್ರಮಗಳನ್ನು ಕೈಗೊಂಡಿದ್ದರು ಹಾಗೂ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿದ್ದರೂ ಸಹ ವಾರಸುದಾರರು ಪತ್ತೆಯಾಗದ ಕಾರಣ ಹಾಗೂ ಸದರಿ ಮಾಲುಗಳನ್ನು ಹಾಗೆಯೇ ಇಟ್ಟುಕೊಂಡಲ್ಲಿ ಇವುಗಳು ಹಾಳಾಗುವ ಸಾಧ್ಯತೆಗಳು ಇರುವುದರಿಂದ ವಾರಸುದಾರರು ಇಲ್ಲದ ಈ ಕೆಳಕಂಡ ಮಾಲುಗಳನ್ನು ಕಾನೂನು ರೀತಿಯ ಪೊಲೀಸ್ ಇಂಟಲಿಜೆನ್ಸ್ ಗೆಜೆಟ್‌ನಲ್ಲಿ ಮಾಲುಗಳ ವಿವರಗಳನ್ನು ಪ್ರಕಟಿಸಿ ನಂತರ ಸಾರ್ವಜನಿಕರಿಗೆ ಬಹಿರಂಗ ಹರಾಜು ಮಾಡಿ ಬಂದ ಹಣವನ್ನು ಖಜಾನೆಗೆ ಕಟ್ಟಲು ಮಾನ್ಯ ನ್ಯಾಯಾಲಯವು ಅನುಮತಿಯನ್ನು ನೀಡಬೇಕೆಂದು ಕೋರುತ್ತೇನೆ.

| ಕ್ರಮ ಸಂಖ್ಯೆ | ಪೊಲೀಸ್ ಠಾಣೆ ಕ್ರೈ.ನಂ. ಮತ್ತು ಕಲಂ | ಪಿ.ಎಫ್. ನಂ. ದಿನಾಂಕ | ವಶಪಡಿಸಿಕೊಂಡ ಮಾಲುಗಳ ವಿವರ |
|---|---|---|---|
| 1 | 197/2000 ಕಲಂ. 379 ಐ.ಪಿ.ಸಿ. | 21/2000 | ಒಂದು ಹರ್ಕ್ಯೂಲೇಸ್ ಸೈಕಲ್ |
| 2 | ” | 22/2000 | ಒಂದು ಅಟ್ಲಾಸ್ ಸೈಕಲ್ |
| 3 | ” | 25/2000 | 1) ಒಂದು ಸೂಟ್‌ಕೇಸ್<br>2) ಒಂದು ಟೈಸ್ಟಾರ್ ಗಡಿಯಾರ<br>3) 08 ವಿವಿಧ ಪ್ಯಾಂಟುಗಳು<br>4) 10 ವಿವಿಧ ಶರ್ಟ್‌ಗಳು |
| 4 | 168/2000 ಕಲಂ. 379 ಐ.ಪಿ.ಸಿ. | 30/2000 | ಒಂದು ಫಿಲಿಪ್ಸ್ ಪೋರ್ಟ್‌ಬಲ್ ಟಿ.ವಿ. |
| 5 | ” | 31/2000 | 29 ಮಕ್ಕಳ ಫ್ರಾಕ್‌ಗಳು |
| 6 | 249/2000 ಕಲಂ 379 ಐ.ಪಿ.ಸಿ. | 34/2000 | ಒಂದು ಕಪ್ಪು ಬಣ್ಣದ ಯೆಜೆಡಿ, ನಂ. ಇಲ್ಲ,<br>ಇಂಜಿನ್ ನಂ. ಐ.ಎಸ್.175001103, ಚಾಸಿಸ್ ನಂ.175001160. |

| ಕ್ರಮ ಸಂಖ್ಯೆ | ಪೊಲೀಸ್ ಠಾಣೆ ಕ್ರೈ.ನಂ. ಮತ್ತು ಕಲಂ | ಪಿ.ಎಫ್. ನಂ. ದಿನಾಂಕ | ವಶಪಡಿಸಿಕೊಂಡ ಮಾಲುಗಳ ವಿವರ |
|---|---|---|---|
| 7 | ” | 36/2000 | 1. ಒಂದು ಬಜಾಜ್ ಚೀತಕ್ ನಂ.ಕೆ.ಎ.03-ಕ್ಯೂ-7217, ಇಂಜಿನ್ ನಂ.06ಎಂ93ಜೆ47220, ಚಾಸಿಸ್ 06ಎಫ್93ಜೆ49040. |
| 8 | ” | 37/2000 | 1. ಒಂದು ಬಜಾಜ್ ಚೀತಕ್ ಸ್ಕೂಟರ್ ನಂ.ಕೆ.ಎ.05-ಹೆಚ್-8652. ಇಂಜಿನ್ ನಂ.06ಇ94ಕೆ40479, ಚಾಸಿಸ್ ನಂ. 06ಸಿ94ಕೆ35372. |
| 9 | ” | 39/2000 | 1. ಮೂರು ಟೈಟಾನ್ ಕೈಗಡಿಯಾರಗಳು |
| 10 | 262/2000 ಕಲಂ. 379 ಐ.ಪಿ.ಸಿ. | 44/2000 | ಎರಡು ಡೀಸೆಲ್ ಇಂಜಿನ್‌ಸೆಟ್ |
| 11 | 192/2000 ಕಲಂ.379 ಐ.ಪಿ.ಸಿ. | 45/2000 | ಒಂದು ಕೈನೆಟಿಕ್ ಹೊಂಡಾ ನಂ.ಕೆ.ಎ.03-ಕ್ಯೂ-3356 ಇಂಜಿನ್ ಮತ್ತು ಚಾಸಿಸ್ ನಂ. ಉಜ್ಜಿರುತ್ತೆ. |
| 12 | 284/2000 ಕಲಂ.457 380 ಐ.ಪಿ.ಸಿ. | 01/2001 | ಮೂರುವರೆ ಕೆ.ಜಿ. ಸಿಲ್ಕ್ |
| 13 | ” | 03/2001 | ಒಂದು ಫಿಲಿಪ್ಸ್ ಟೇಪ್ ರೆಕಾರ್ಡರ್ |
| 14 | ” | 04/2001 | ಒಂದು ಕ್ರೌನ್ ಟಿ.ವಿ. (ಪೋರ್ಟಬಲ್) ಕಪ್ಪು ಬಿಳುಪು |
| 15 | 187/2001 ಕಲಂ. 379 ಐ.ಪಿ.ಸಿ. | 37/2001 | ಒಂದು ಅಟ್ಲಾಸ್ ಸೈಕಲ್ |
| 16 | ” | 38/2001 | ಒಂದು ಅಟ್ಲಾಸ್ ಸೈಕಲ್ |
| 17. | ” | 39/2001 | ಒಂದು ಹೀರೋ ರೇಂಜರ್ ಸೈಕಲ್ |
| 18. | 102/2002 ಕಲಂ. 379 ಐ.ಪಿ.ಸಿ. | 18/2002 | ಒಂದು ನೋಖಿಯಾ ಮೊಬೈಲ್ |
| 19 | 107/2002 ಕಲಂ. 379 ಐ.ಪಿ.ಸಿ. | 20/2002 | ಒಂದು ಯೆಜೆಡಿ ಮೋಟಾರು ಸೈಕಲ್ ನಂ. ಸಿ.ಎ.ಸಿ-2313 ಇಂಜಿನ್ ನಂ.ಐ.ಐ.ಡಿ. 250013ಸಿಜಿ7, ಚಾಸಿಸ್ ನಂ.103667174111. |
| 20 | ” | 34/2002 | 1) ಒಂದು ಪೆನಾಸೋನಿಕ್ ಟೇಪ್ ರೆಕಾರ್ಡರ್<br>2) ಒಂದು ಸೀಮ ಟೇಪ್ ರೆಕಾರ್ಡರ್ ಮತ್ತು ಎಮರೆಜೆನ್ಸಿ ಲೈಟ್<br>3) 03 ಸಿಂಥೇಟಿಂಕ್ ಸೀರೆಗಳು<br>4) ಒಂದು ಐರನ್ ಬಾಕ್ಸ್ |
| 21 | ” | 35/2002 | ಒಂದು ಕೋರಿಯಾ ವಿ.ಸಿ.ಆರ್. |
| 22 | ” | 36/2002 | 1) ಒಂದು ಬಿಳಿ ಮತ್ತು ಕೆಂಪು ಕಲ್ಲಿನ ನೆಕ್ಲೇಸ್. (ಉಮಾಗೋಲ್ಡ್)<br>2) ಒಂದು ಬಾತ್‌ಕೋಳಿನ ನಕ್ಲೇಸ್ (ಉಮಾಗೋಲ್ಡ್)<br>3) ಒಂದು ಉದ್ದನೆಯ ಉಮಾಗೋಲ್ಡ್‌ನ ಸರ.<br>4) ಒಂದು ಬಿಳಿ ಮತ್ತು ಕೆಂಪು ಕಲ್ಲಿನ ಕೈಚೈನು.<br>5) ಒಂದು ಹೆರ್ ಡ್ರಾಪ್ ಮತ್ತು ಲೋಲಾಕ್.<br>6) ಒಂದು ಜೊತೆ ಬಿಳಿ ಕಲ್ಲು ಮತ್ತು 2 ನೀಲಿ ಕಲ್ಲಿನ ಸ್ಟಾರ್ ಮತ್ತು ಲೋಲಾಕ್ ಉಮಾಗೋಲ್ಡ್‌ನವು ಆಗಿರುತ್ತವೆ. |
| 23 | 183/02 ಕಲಂ. 379 ಐ.ಪಿ.ಸಿ. | 41/2002 | ಒಂದು ಕಪ್ಪು ಬಣ್ಣದ ಸೈಕಲ್ |
| 24 | ” | 42/2002 | ಒಂದು ಕೆಂಪು ಬಣ್ಣದ ಸೈಕಲ್ |
| 25 | ” | 43/2002 | ಒಂದು ಹೀರೋ ರೇಂಜರ್ ಸೈಕಲ್ |
| 26 | 102/2003 ಕಲಂ. 379 ಐ.ಪಿ.ಸಿ. | 48/2002 | ಒಂದು ಮೋಟಾರಾಲ ಮೊಬೈಲ್ |
| 27 | ” | 49/2002 | ಒಂದು ನೋಖಿಯಾ ಮೊಬೈಲ್ |
| 28 | ” | 50/2002 | 1) ಒಂದು ಪೆನಾಸೋನಿಕ್ ಫೋನ್<br>2) ಒಂದು ಸೀಮನ್ಸ್ ಮೊಬೈಲ್<br>3) ಒಂದು ಸೋನಿ ಮೊಬೈಲ್ |
| 29 | 317/2002 ಕಲಂ.379 ಐ.ಪಿ.ಸಿ. | 88/2002 | ಒಂದು ಲೂನಾ ನಂ. ಸಿ.ಎ.ಡಿ. 2060 ಇಂಜಿನ್ ನಂ. ಮತ್ತು ಚಾಸಿಸ್ ನಂ. ಉಜ್ಜಿರುತ್ತೆ. |

ಈ ಮೇಲ್ಕಂಡ ವಾರಸುದಾರರು ಇಲ್ಲದ ಮಾಲುಗಳನ್ನು ಪೊಲೀಸ್ ಇಂಟಲಿಜೆನ್ಸ್ ಗೆಜೆಟ್‌ನಲ್ಲಿ ವಿವರಗಳನ್ನು ಪ್ರಕಟಿಸಲು ಹಾಗೂ ಕಾನೂನು ರೀತ್ಯ ಸಾರ್ವಜನಿಕ ಹರಾಜು ಮಾಡಿ ಬಂದ ಹಣವನ್ನು ಸರ್ಕಾರಿ ಖಜಾನೆಗೆ ಜಮಾ ಮಾಡಲು ಮಾನ್ಯ ನ್ಯಾಯಾಲಯವು ಅನುಮತಿಯನ್ನು ನೀಡಬೇಕಾಗಿ ಕೋರುತ್ತೇನೆ.

ಇನ್ಸ್‌ಪೆಕ್ಟರ್ ಆಫ್ ಪೊಲೀಸ್ ಸಿಟಿ ಮಾರ್ಕೆಟ್ ಪೊಲೀಸ್ ಠಾಣೆ,
ಬೆಂಗಳೂರು ನಗರ.

ಪಿ.ಆರ್. 1212

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ರವರ ನಡವಳಿ**
**ಸಂಖ್ಯೆ: ಸಿಬ್ಬಂದಿ. ಶಿಸ್ತು.ಅಗೈಹಾ.35:2004-05, ದಿನಾಂಕ: 22ನೇ ಆಗಸ್ಟ್ 2005**

**ವಿಷಯ :** ಶ್ರೀ ಕೆ. ಸುರೇಶ್ ಎರಡನೇ ದರ್ಜೆ ಭೂಮಾಪಕರು ಇವರು ಅನಧಿಕೃತ ಗೈರು ಹಾಜರಿ ಹಾಗೂ ಏಕಕಾಲದಲ್ಲಿ 2 ಹುದ್ದೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬಗ್ಗೆ-ಅಂತಿಮ ಆದೇಶ ಕುರಿತು.

**ಉಲ್ಲೇಖ :**
1) ಭೂ.ಸ.ನಿ. ಬೆಂಗಳೂರು ಇವರ ಪತ್ರದ ಸಂಖ್ಯೆ: ಸಿಬ್ಬಂದಿ.2.ವಿವ.67:2003-04, ದಿನಾಂಕ: 19.5.2004 ಮತ್ತು 16.9.2004.
2) ಈ ಕಛೇರಿಯ ಅರೆಸರ್ಕಾರಿ ಪತ್ರದ ಸಂಖ್ಯೆ: ಸಿಬ್ಬಂದಿ.ಎಡಭೂ.ಅಗೈಹಾ.74:2004-05, ದಿನಾಂಕ: 27.10.2004.
3) ಅಧೀಕ್ಷಕ ಇಂಜಿನಿಯರ್ (ಅ) ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ರವರ ಅ.ಸ.ಪ. ಸಂಖ್ಯೆ: ಸಿಬಿಎಸ್.85:ಬ್ಯಾಕ್‌ಲಾಗ್-ಇಎಸ್‌ಸಿ.2004-05, ದಿನಾಂಕ: 8.11.2004.
4) ಈ ಕಛೇರಿಯ ಪತ್ರದ ಸಂಖ್ಯೆ: ಸಿಬ್ಬಂದಿ:ಶಿಸ್ತು.ಅಗೈಹಾ.35:2004-05, ದಿನಾಂಕ: 28.12.2004 ಹಾಗೂ ಅ.ಸ.ಪ.ಸಂಖ್ಯೆ. ದಿನಾಂಕ: 9.2.2005.
5) ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ರವರ ಕಾರಣ ಕೇಳಿ ನೋಟೀಸು ಸಂಖ್ಯೆ: ಸಿಬ್ಬಂದಿ:ಶಿಸ್ತು.ಅಗೈಹಾ. 2:2004-05, ದಿನಾಂಕ: 14.2.2005 ದೋಷಾರೋಪಣೆ ಪಟ್ಟಿಯೊಂದಿಗೆ.
6) ಶ್ರೀ ಕೆ. ಸುರೇಶ್, ಎ.ದ.ಭೂ. ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 15.3.2005.
7) ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರುರವರ ನಡವಳಿ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅಗೈಹಾ.2:2004-05, ದಿನಾಂಕ: 28.3.2005 (ವಿಚಾರಣಾಧಿಕಾರಿಗಳ ನೇಮಕ)
8) ಮುಖ್ಯ ಇಂಜಿನಿಯರ್‌ರವರ ಕಛೇರಿ, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ರವರ ಕಾರಣ ಕೇಳಿ ನೋಟೀಸ್ ಸಂಖ್ಯೆ: ಸಿಬಿಎಸ್.85:ಬ್ಯಾಕ್‌ಲಾಗ್.ಇಎಸ್‌ಸಿ:2004-05, ದಿನಾಂಕ: 27.7.2005.

**ಪ್ರಸ್ತಾವನೆ:**

ಶ್ರೀ ಕೆ. ಸುರೇಶ್, ತಂದೆ ಸಿ. ಕಾಡಯ್ಯ ರವರು ಈ ಇಲಾಖೆಯಲ್ಲಿ ದ್ವಿತೀಯ ದರ್ಜೆ ಭೂಮಾಪಕರಾಗಿ, ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ರವರ ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ.ಎಡಭೂ. ನೇಮಕ.167:95-96, ದಿನಾಂಕ: 22.1.97ರ ಮೇರೆಗೆ ನೇಮಕಗೊಂಡು ಭೂದಾಖಲೆಗಳ ಸಹಾಯಕ ನಿರ್ದೇಶಕರು, ರಾಮನಗರ ಕಛೇರಿಯಲ್ಲಿ ದಿನಾಂಕ: 29.01.97 ರಂದು ಕರ್ತವ್ಯದ ಮೇಲೆ ಹಾಜರಾಗಿರುತ್ತಾರೆ. ಈ ನೇಮಕವು ಸ್ಥಾನಪನ್ನವಾಗಿದ್ದು, ಇವರ ಖಾಯಂ ಪೂರ್ವಾವಧಿ ದಿನಾಂಕ: 29.1.97 ರಿಂದ 28.1.99, ಹಾಗೂ ವಿಸ್ತರಿಸಿ ದಿನಾಂಕ: 29.1.99 ರಿಂದ 4.05.2000 ರವರೆಗೆ ಕರ್ನಾಟಕ ಸರ್ಕಾರಿ ಸೇವಾ (ಖಾಯಂ ಪೂರ್ವಾವಧಿ) ನಿಯಮಾವಳಿ 1977ರ ನಿಯಮ 5(1)(ಬಿ) ಮತ್ತು 4(i) (ii)ರ ಪ್ಯಾರ 2ರ ಪ್ರಕಾರ ತೃಪ್ತಿಕರವಾಗಿ ಪೂರೈಸಿದ್ದಾರೆಂದು ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ಇವರು ಸಿಬ್ಬಂದಿ. ಖಾಪೂಪೋ.8(ii):2000-01, ದಿನಾಂಕ: 9.3.2001ರ ಆದೇಶದಲ್ಲಿ ಘೋಷಿಸಿದ್ದಾರೆ. ನಂತರ ಈ ಕಛೇರಿಯ ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ.ವರ್ಗ.1: 2002-03, ದಿನಾಂಕ: 29.6.2002ರ ಆದೇಶದ ಪ್ರಕಾರ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ಕಛೇರಿಗೆ ವರ್ಗಾವಣೆಗೊಂಡಿದ್ದು, ಅದರಂತೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ರಾಮನಗರಂ ಕಛೇರಿಯಿಂದ ದಿನಾಂಕ: 06.07.2002 ರಂದು ಪೂರ್ವಾಹ್ನ ಬಿಡುಗಡೆ ಹೊಂದಿ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ಕಛೇರಿಯಲ್ಲಿ ದಿನಾಂಕ: 06.07.2002 ರಂದು ಅಪರಾಹ್ನ ಕರ್ತವ್ಯಕ್ಕೆ ಹಾಜರಾಗಿ ದಿನಾಂಕ: 15.07.2003 ರಿಂದ ದಿನಾಂಕ: 31.12.2003 ರವರೆಗೆ ಕಛೇರಿ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ಮತ್ತೆ ದಿನಾಂಕ: 01.02.2004 ರಿಂದ ಇಲ್ಲಿಯವರೆವಿಗೂ ಯಾವುದೇ ರಜೆ ಅರ್ಜಿ ಅಥವಾ ಅನುಮತಿ ಪಡೆಯದೇ ಗೈರು ಹಾಜರಾಗಿರುತ್ತಾರೆ.

ಉಲ್ಲೇಖ (2) ರಲ್ಲಿ ತಿಳಿಸಿರುವಂತೆ, ಅಧೀಕ್ಷಕ ಇಂಜಿನಿಯರ್ (ಅ), ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ರವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿ.ಬಿ.ಎಸ್. 85:ಬ್ಯಾಕ್‌ಲಾಗ್.ಇ.ಎಸ್.ಸಿ.:2004-05, ದಿನಾಂಕ: 8.11.2004 ರಲ್ಲಿ ಶ್ರೀ ಕೆ. ಸುರೇಶ್ ಬಿನ್ ಸಿ. ಕಾಡಯ್ಯ ಇವರು ಸಹಾಯಕ ಇಂಜಿನಿಯರ್ ಆಗಿ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿ ದಿನಾಂಕ: 06.02.2004 ರಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ, ಕ.ನೀ.ನಿ.ನಿ. ನಂಬರ್-2, ಯಗಚಿ ಯೋಜನಾ ಕಟ್ಟಡಗಳ ಉಪವಿಭಾಗ, ಬೇಲೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವರೆಂದು ತಿಳಿಸಿರುತ್ತಾರೆ. ಈ ಹುದ್ದೆಗೆ ಅರ್ಜಿ ಹಾಕಲು ಅನುಮತಿಯನ್ನು ಈ ಇಲಾಖೆಯಿಂದ ಪಡೆಯದೆ, ಅವರು ಹೊಂದಿರುವ ಹುದ್ದೆ ಬಗ್ಗೆ ಲೋಕೋಪಯೋಗಿ ಇಲಾಖೆಗೂ ತಿಳಿಸದೆ ಮರೆಮಾಚಿರುತ್ತಾರೆ. ಇದು ಕರ್ನಾಟಕ ಸರ್ಕಾರಿ ಸೇವಾ (ಜನರಲ್ ರಿಕ್ರೂಟ್‌ಮೆಂಟ್) ನಿಯಮ (5)ರ ಸ್ಪಷ್ಟ ಉಲ್ಲಂಘನೆಯಾಗಿದ್ದು, ಈ ಬಗ್ಗೆ ಅವಶ್ಯ ಕ್ರಮ ಜಾರಿಗೊಳಿಸಲು ಲೋಕೋಪಯೋಗಿ ಇಲಾಖೆಗೆ ತಿಳಿಸಲಾಗಿದ್ದು, ಅದರಂತೆ, ನೋಟೀಸನ್ನು ದಿನಾಂಕ: 27.7.2005 ರಂದು ಜಾರಿ ಮಾಡಿರುತ್ತಾರೆ.

ಸದರಿ ನೌಕರರು ಸಹಾಯಕ ಇಂಜಿನಿಯರ್ ಆಗಿ ನೇಮಕಗೊಂಡಿದ್ದರೂ ಎರಡನೇ ದರ್ಜೆ ಭೂಮಾಪಕರ ಹುದ್ದೆಗೆ ರಾಜೀನಾಮೆ ಸಲ್ಲಿಸಿರುವುದಿಲ್ಲ, ಹಾಗೂ ಈ ಕಛೇರಿಗೆ ಯಾವುದೇ ಮಾಹಿತಿಯನ್ನು ನೀಡದೆ, ಗೈರುಹಾಜರಿಯಲ್ಲಿ ಮುಂದುವರೆದು, ಲೋಕೋಪಯೋಗಿ ಇಲಾಖೆಯ ಕೆಲಸ ನಿರ್ವಹಿಸುತ್ತಿದ್ದು, ಒಂದೇ ಸಮಯದಲ್ಲಿ ಎರಡು ಇಲಾಖೆಯ ವಿವಿಧ ಹುದ್ದೆಯಲ್ಲಿ ಮುಂದುವರೆಯುತ್ತಿರುವುದು, ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(1) (2) (3) ಉಲ್ಲಂಘಿಸಿ ತೀವ್ರ ತರದ ದುರ್ನಡತೆ ಎಸಗಿರುತ್ತಾರೆ. ಈ ಬಗ್ಗೆ ಉಲ್ಲೇಖ (5)ರ ಪ್ರಕಾರ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ಇವರು ದೋಷಾರೋಪಣೆ ಪಟ್ಟಿಯನ್ನು ಸೂಕ್ತ ನೋಟೀಸಿನೊಂದಿಗೆ ಜಾರಿ ಮಾಡಿದ್ದು, ಸದರಿ ದೋಷಾರೋಪಣಾ ಪಟ್ಟಿಯನ್ನು ದಿನಾಂಕ: 14.02.2005 ರಂದು ಹೊರಡಿಸಿರುವ ಪ್ರತಿಯನ್ನು ದಿನಾಂಕ: 28.02.2005 ರಂದು ಶ್ರೀ ಕೆ. ಸುರೇಶ್, ದ್ವಿತೀಯ ದರ್ಜೆ ಭೂಮಾಪಕರು ಇವರು ಸ್ವೀಕರಿಸಿ, ಸಹಿ ಮಾಡಿ ಪದನಾಮವನ್ನು ಸಹಾಯಕ ಇಂಜಿನಿಯರ್ ಎಂದು ನಮೂದಿಸಿರುತ್ತಾರೆ.

ಅವರ ವಿರುದ್ಧ ಮಾಡಲಾದ ದೋಷಾರೋಪಣೆಗೆ, ತಮ್ಮ ಲಿಖಿತ ಉತ್ತರವನ್ನು ದಿನಾಂಕ: 15.03.2005 ರಂದು ನೀಡಿ, ತಮ್ಮ ಹೇಳಿಕೆಯಲ್ಲಿ ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿರುವುದಿಲ್ಲ. ಆದುದರಿಂದ ಗೈರು ಹಾಜರಾಗಿಲ್ಲ ಎಂದು ತಿಳಿಸುತ್ತಾ ಸಹಾಯಕ ಅಭಿಯಂತರರು, ಹುದೆಯಲ್ಲಿ ಕೆಲಸ ನಿರ್ವಹಿಸುತ್ತಿರುವುದಾಗಿ ತಿಳಿಸುತ್ತಾ, ಆಡಳಿತಾತ್ಮಕ ವಿಚಾರಗಳು ತಿಳಿಯದಿರುವುದರಿಂದ ರಾಜೀನಾಮೆ ನೀಡಿಲ್ಲ, ಈಗ ಸಲ್ಲಿಸುತ್ತಿರುವ ಪ್ರತಿರಕ್ಷಾ ಹೇಳಿಕೆಯಲ್ಲಿ ರಾಜೀನಾಮೆ ಸಮರ್ಪಿಸುತ್ತಿದ್ದೇನೆ ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. (ಪ್ರತ್ಯೇಕ ರಾಜೀನಾಮೆ ಪತ್ರ ಇರುವುದಿಲ್ಲ).

ಈ ರೀತಿಯಾದ ಅತೀವ ದುರ್ನಡತೆಯು ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಾಗಿದ್ದು, ಎಲ್ಲೆ ಮೀರಿ ವರ್ತಿಸಿರುವುದು, ಸರ್ಕಾರಿ ನೌಕರಿಗೆ ಅನರ್ಹತೆ ಹೊಂದಿದಂತಾಗಿದೆ, ಕಾರಣ ಈ ಆದೇಶ.

